ವರುಷ-೩ ] S. S. Hiremath Sanikop [ ಕುಸುಮ-೨

# ನೋಪಾಸಾನ ಓಲೆಗಳು

(ಜೀವನ ಚರಿತ್ರೆಯೊಂದಿಗೆ)



ಬರೆದವರು

ಶ್ರೀ. ಪಿ. ವೆಂಕೋಬಾಚಾರ್ಯ, ಬಿ. ಎ., ಬಿ.ಟಿ.

ಆನಂದ ಗ್ರಂಥಮಾಲಾ, ಹುಬ್ಬಳ್ಳಿ.






ಮೇ
೧೯೫೩

ಸಾದಾ ಪ್ರತಿ: ೧-೪-೦
ಉತ್ತಮ ಪ್ರತಿ: ೨-೦-೦

ಸಲಹೆಗಾರರು:

ಶ್ರೀ. ಎಸ್. ಆರ್. ಮಳಗಿ, ಎಂ. ಎ. ಬಿ. ಟಿ.

ಶ್ರೀ. ಎನ್. ಕೆ. ಕುಲಕರ್ಣಿ, ಎಂ. ಎ. ಬಿ. ಟಿ.

ಶ್ರೀ. ಆರ್. ವ್ಹಿ. ಕುಲಕರ್ಣಿ, ಎಂ. ಎ. ಬಿ. ಟಿ.

ಶ್ರೀ. ದೇಸಾಯಿ ದತ್ತಮೂರ್ತಿ



923
MOP V

ಸಂಪಾದಕರು:

**ಶ್ರೀ. ಪಿ. ವೆಂಕೋಬಾಚಾರ್ಯ**, ಬಿ. ಎ. ಬಿ. ಟಿ.

108007

## ಇದೇ ವರುಷ ನಮ್ಮ ಮಾಲೆಯಲ್ಲಿ
## ಪ್ರಕಟವಾಗಲಿರುವ ಪುಸ್ತಕಗಳು

"ಪ್ರವಾದಿ": (ಖಲೀಲ್ ಗಿಬ್ರಾನರ Prophet) — ಶ್ರೀ. ದೇಸಾಯಿ ದತ್ತಮೂರ್ತಿ

"ಕವನ ಸಂಗ್ರಹ": — ಶ್ರೀ. ಶ್ರೀಧರ ಖಾನೋಳಕರ

"ಮುಡಿಯದ ಹೂ": (ಮೋಪಾಸಾನ ಕತೆಗಳು) — ಶ್ರೀ. ಪಿ. ವೆಂಕೋಬಾಚಾರ್ಯ

"ಕೆಲವು ಕತೆಗಳು": — ಶ್ರೀ. ಪಿ. ವೇಣುಗೋಪಾಲ

ಒಂದು ಕಾದಂಬರಿ — ಪ್ರೊ. ದ. ರಾ. ಬೇಂದ್ರೆ, ಎಂ. ಎ.



ಮುದ್ರಕರು

**ಕೆ. ಜಿ. ತಾಪಸ**, ಬಿ. ಎ.

ಒಡೆಯರು: ಸುಧಾ ಪ್ರೆಸ್, ಹುಬ್ಬಳ್ಳಿ.

ಪ್ರಕಾಶಕರು

**ಪಿ. ವ್ಹಿ. ಆಚಾರ್ಯ & ಕಂ.**

೩೦೩೦ ಗವಳೀಗಲ್ಲಿ, ಹುಬ್ಬಳ್ಳಿ.

ಪರಿಶೀಲನಾ ಆಗಿದೆ.

# ನನ್ನ ಅರಿಕೆ

ಸಾಹಿತಿಯ ಪತ್ರಸಾಹಿತ್ಯವು ಅವನ ಜೀವನದ ಅನೇಕ ಮಹತ್ವದ ವಿಷಯಗಳನ್ನು ವಿಶದೀಕರಿಸುವುದಲ್ಲದೆ ಅವನು ಜೀವಿಸಿದ ಕಾಲದ ರಾಜ ಕೀಯ, ಮತ್ತು ಸಮಾಜದ ಪರಿಸ್ಥಿತಿಯನ್ನು ವಿವರಿಸುವವು ಎಂಬುದರಲ್ಲಿ ಯಾವ ಸಂಶಯವೂ ಇಲ್ಲೆಂದು ನನ್ನ ಭಾವನೆ. ಭಾರತ ಸಾಹಿತ್ಯವಲ್ಲಿ, (ಪತ್ರ ಸಾಹಿತ್ಯದಲ್ಲಿ) ನಮ್ಮ ಮುಖ್ಯ ಪ್ರಧಾನರಾದ ಪಂಡಿತ ಜವಹರಲಾಲರ "ಮಗಳಿಗೆ ತಂದೆಯ ಓಲೆಗಳು" ಶ್ರೀ ಸಿದ್ದವ್ವನಹಳ್ಳಿ ಕೃಷ್ಣಶರ್ಮರ "ಜಗತ ಕಥಾವಲ್ಲರಿ" ಮತ್ತು ಶ್ರೀ ಸಿ. ಕೃಷ್ಣ ಇವರ "ಮುಗುದೆಗೆ ಪತ್ರಗಳು" "ಪೂರ್ಣಿಮಾ" ಕನ್ನಡದಲ್ಲಿ ಪ್ರಕಟವಾದ ಪತ್ರ ಸಾಹಿತ್ಯವು. ಪತ್ರ ಸಾಹಿ ತ್ಯವು ಪಾಶ್ಚಾತ್ಯ ಸಾಹಿತ್ಯದಲ್ಲಿ ಅತ್ಯುತ್ತಮ ಸ್ಥಾನವನ್ನು ಪಡೆದಿದೆಯೆಂಬು ದನ್ನು ಬೇರೆ ಹೇಳಬೇಕಾಗಿಲ್ಲ. ಆದುದರಿಂದಲೇ ಪ್ರಪಂಚದ ಅತ್ಯುತ್ತಮ ಕತೆಗಾರನಾದ ಗಾಯ್-ದ-ಮೋಪಾಸಾನ ಜೀವನದ ವಿವರಗಳನ್ನು ನಾನು ಅಭ್ಯಾಸಮಾಡುವಾಗ ನನಗೆ ದೊರೆತ ಅನೇಕ ಪತ್ರಗಳನ್ನು ಸಂಗ್ರಹಿಸಿ ಕನ್ನಡ ಜನತೆ ಕೊಡುತ್ತಲಿದ್ದೇನೆ. ನಮ್ಮ ಕನ್ನಡ ಸಾಹಿತ್ಯಕ್ಕೆ ಇದೊಂದು ಹೊಸ ಕಾಣಿಕೆಯೆಂದು ಭಾವಿಸಿದ್ದೇನೆ. ಕನ್ನಡದಲ್ಲಿ ಈಗಾಲೇ ಶ್ರೀ ನಿರಂಜನರ, ಪ್ರೊ. ಹಿರೇಮಲ್ಲೂರು ಈಶ್ವರನ್ನರ, ಶ್ರೀ ತಿ. ಸಿದ್ದಪ್ಪನವರ, ಮತ್ತು ನನ್ನ 'ಚಿತ್ರಗುಪ್ತ' 'ಜನಪ್ರಗತಿ' 'ಉಷಾ' 'ನವಯುಗ' ಮತ್ತು 'ಜಯಕರ್ನಾಟಕ' ಗಳ ಮೂಲಕ ಅನೇಕ ಪತ್ರಗಳು ಪ್ರಕಟವಾಗಿವೆ. ಶ್ರೀ ತಿ. ಸಿದ್ದಪ್ಪನವರ ಪತ್ರಗಳು "ಪೂರ್ಣಿಮಾ" ಎಂಬ ಪುಸ್ತಕರೂಪದಲ್ಲಿ ಪ್ರಕಟವಾಗಿವೆ. ಇದೇ ಮಾರ್ಗದಲ್ಲಿ ನಾನು ಆಗಲೇ ಧಾರವಾಡದ "ಜಯ್‌ಕರ್ನಾಟಕ" ವಾರಪತ್ರಿ ಕೆಯ ಮೂಲಕ ಪ್ರಕಟವಾದ ಪತ್ರಗಳನ್ನು, ಮತ್ತೆ ಕೆಲವು ಪತ್ರಗಳನ್ನು ಹೊಸದಾಗಿ ಅಯ್ದು ಆನಂದ ಗ್ರಂಥ ಮಾಲೆಯಲ್ಲಿ ಈಗ ಪ್ರಕಟಿಸುತ್ತಲಿದ್ದೇನೆ.

ಗಾಯ್-ದ-ಮೋಪಾಸಾನ ಜೀವನದ ಕೆಲವು ಮುಖ್ಯಾಂಶಗಳನ್ನು ತಿಳಿಯಬಹುದಾದ ವಿಷಯನ್ನೊಳಗೊಂಡ ಈ ಪತ್ರಸಾಹಿತ್ಯ ಕನ್ನಡಿಗಂಗೆ

ರುಚಿಸುವುದೆಂದು ನನ್ನ ಭಾವನೆ. ಈ ಪತ್ರ ಸಂಕಲನವನ್ನು ಆದಷ್ಟು ಶ್ರದ್ಧೆವಹಿಸಿ, ಮೋಪಾಸಾನ ಜೀವನದ ಚರಿತ್ರೆಗೆ ಹೊಂದಿಕೊಳ್ಳುವಂತೆ ಕೂಡಿಸಲಾಗಿದೆ. ಇದರಲ್ಲಿ ಅನಿವಾರ್ಯವಾಗಿ ಕೆಲವೊಂದು ತಪ್ಪುತಡೆಗಳಾಗಿದ್ದಲ್ಲಿ ಓದುಗರ, ವಿಮರ್ಶಕರ, ಕ್ಷಮೆಯನ್ನು ಬೇಡಿಕೊಳ್ಳುತ್ತೇನೆ.

ಹುಬ್ಬಳ್ಳಿ
೧-೪-೫೩

ಪಿ. ವೆಂಕೋಬಾಚಾರ್ಯ.

# ವಿಜ್ಞಾಪನೆ



ಮೂರನೆಯ ವರುಷದ ಎರಡನೆಯ ಪುಷ್ಪವನ್ನಾಗಿ ಈ "ಮೋಪಾಸಾನ ಓಲೆಗಳು" (ಜೀವನ ಚರಿತ್ರೆ ಸಹಿತ) ಎಂಬ ಪುಸ್ತಕವನ್ನು ಪ್ರಕಟಿಸಲು ಸಂತೋಷವೆನಿಸುತ್ತದೆ. ಮುಂದೆ ಇದೇ ವರುಷ ಪ್ರಖ್ಯಾತ ತತ್ವಜ್ಞಾನಿಯಾದ ಗಿಬ್ರಾನ್‌ರವರ Prophet ದ ಅನುವಾದವನ್ನು, ಅಲ್ಲದೆ, ಕವಿಗಳಾದ ಶ್ರೀ ಶ್ರೀಧರ ಖಾನೋಳಕರರ ಕವನ ಸಂಗ್ರಹವನ್ನೂ, ಅಲ್ಲದೆ ಮೋಪಾಸಾನ ಕತೆಗಳ ಮತ್ತೊಂದು ಸಂಗ್ರಹವನ್ನೂ ಈ ವರುಷ ಚಂದಾದಾರರಿಗೆ ಕೊಡಬೇಕೆಂದು ನಿಶ್ಚಯಿಸಿದ್ದೇವೆ. ಹಿಂದೆರಡು ವರುಷಗಳು ನಮ್ಮನ್ನು ಆದರಿಸಿದಂತೆ, ಶಾಲೆ-ಕಾಲೇಜುಗಳೂ, ವಾಚನಾಲಯದವರೂ, ಮತ್ತು ವಾಚಕರೂ ನಮ್ಮನ್ನು ಪ್ರೋತ್ಸಾಹಿಸಬೇಕಾಗಿ ಕೋರುತ್ತೇವೆ.

ಇದನ್ನು ಅಂದವಾಗಿ ಮುದ್ರಿಸಿದ ಸುಧಾ ಪ್ರೆಸ್ಸಿನ ಒಡೆಯರಾದ ಶ್ರೀ ಕೆ. ಜಿ. ತಾಪಸ ಬಿ. ಎ. ಇವರಿಗೆ ನಮ್ಮ ವಂದನೆಗಳು.

೬೦೬೦ ಗವಳಿಗಲ್ಲಿ
೧-೪-೧೯೫೩

ಪಿ. ವಿ. ಆಚಾರ್ಯ & ಕಂ.
ಸಂಚಾಲಕರು.
ಆನಂದ ಗ್ರಂಥಮಾಲಾ, ಹುಬ್ಬಳ್ಳಿ.

# ಪತ್ರ ಸಾಹಿತ್ಯ

ಅಂಚೆ- ಟಪಾಲಿನ ಅನುಕೂಲಗಳ ಜೊತೆಗೆ, ಜನರಲ್ಲಿ ಓದುಬರಹಗಳ ಸಾಮಾನ್ಯ ಜ್ಞಾನವು ಸರ್ವತ್ರ ವ್ಯಾಪಿಸಿದೆ. ಹೀಗಾಗಿ ಎಲ್ಲರೂ ಪತ್ರಗಳನ್ನು ಬರೆಯುವವರೇ. ಆದರೆ, ಬರೆದ ಪತ್ರಗಳೆಲ್ಲಾ ಸಾಹಿತ್ಯವಾಗುವುದಿಲ್ಲ. ವ್ಯಾವಹಾರಿಕ ಪತ್ರಗಳ ಸಂಖ್ಯೆಯೇ ಹೆಚ್ಚು. ಪತ್ರ ವಿಧಾನವನ್ನು **ರಿಚರ್ಡಸನ್ನ**ನು ಕಾದಂಬರಿಯ ನಿರೂಪಣೆಗೆ ಬಳಸಿಕೊಂಡನು. ಅವನು ಕತೆಯನ್ನು ಹೇಳುವುದಿಲ್ಲ. ಉತ್ತರ ಪ್ರತ್ಯುತ್ತರಗಳ ಪತ್ರ ಮಾಲೆಯನ್ನೇ ರಚಿಸಿ ಕತೆಗೆ ರೂಪುಕೊಟ್ಟಿರುವನು. ಕಾಲ್ಪನಿಕ ಪತ್ರಗಳು ಬೇರೆ. ಪಾತ್ರಗಳ ಕಲ್ಪನೆ, ಈರ್ವರ ನಡುವೆ ಅಭಿಪ್ರಾಯ-ಅನುಭವಗಳ ವಿನಿಮಯವೇ ಇವುಗಳ ಉದ್ದೇಶ. ಶೈಲಿಯ ದೃಷ್ಟಿಯಿಂದ, ಹೇಳುವ ರೀತಿಯಿಂದ, ಸಾಹಿತ್ಯದ ಗುಂಪಿಗೆ ಸೇರಿಸಬಹುದಾದ ಪತ್ರಗಳೆಷ್ಟೋ ಇವೆ. ಆಸ್ಥಾನಿಕರ ಪತ್ರಗಳು, ರಾಯಭಾರಿಗಳ ವ್ಯವಹಾರ, ಅರಸುಮನೆತನದವರ ಪರಸ್ಪರ ಪತ್ರವ್ಯವಹಾರ, ಮುತ್ಸದ್ದಿಗಳ ರಾಜಕಾರಣಿಗಳ ಪತ್ರಗಳು, ವೃತ್ತಪತ್ರಿಕೆಗಳಿಗೆ ಬರೆದ ಪತ್ರಗಳು— ಈ ಎಲ್ಲವುಗಳಲ್ಲಿ ನಾವು ಪತ್ರಸಾಹಿತ್ಯದ ವೈಖರಿಯನ್ನು ಕಾಣಬಹುದು.

ಆದರೆ ನಾವು ಇಲ್ಲಿ ವಿಚಾರಿಸುವ ಪತ್ರಗಳು ಸಾಹಿತಿಗಳಿಗೆ ಸಂಬಂಧಪಟ್ಟವುಗಳು. ಅವರು ಊಹಿಸಿ ಬರೆದ ಪತ್ರಗಳಲ್ಲ. ಒಬ್ಬ ಸಾಹಿತಿಯು ತನ್ನ ಜೀವನದಲ್ಲಿ ಇತರ ಸಾಹಿತಿಗಳಿಗೆ ಮಿತ್ರರಿಗೆ ಬಂಧುಗಳಿಗೆ ಪತ್ರಗಳನ್ನು ಬರೆಯುವ ಪ್ರಸಂಗಗಳು ಒದಗಿ ಬರುವವು. ಅವನು ಸಾಹಿತಿಯಾಗಿರುವುದರಿಂದ ಅವನ ಸಹಜ ಮನೋಧರ್ಮವು, ಅದರ ಪ್ರತಿಛಾಯೆಯಾದ ಶೈಲಿಯು, ಅವನ ಪತ್ರಗಳಲ್ಲಿ ಒಡಮೂಡುವುದು ನಿಶ್ಚಿತ, ಅತಿ ಸಹಜ. ಅವನ ಇತರ ನಿರ್ದಿಷ್ಟ ಸಾಹಿತ್ಯ ಸೃಷ್ಟಿಯಿಂದ ಇವು ಬೇರ್ಪಟ್ಟದ್ದಾಗಿದ್ದು, ಇವುಗಳಿಗೆ ಒಂದು ಅಮೂಲ್ಯವಾದ ಬೆಲೆ ಇರುವುದು. ಏನೆಂಬುದನ್ನು ಮುಂದೆ ಕಾಣಿಸಿದ ಕೆಲವು ಉದಾಹರಣೆಗಳಿಂದ ಅರಿಯಬಹುದು.

ಇಂತಹ ಪತ್ರ ಸಾಹಿತ್ಯಪರಂಪರೆಯು ನಮಗೆ ಹೊಸತಾದರೂ

ಪಾಶ್ಚಾತ್ಯರಲ್ಲಿ ಬಹಳ ಹಿಂದಿನಿಂದ ರೂಢಿಯಾಗಿ ಬಂದಿದೆ. ಆಂಗ್ಲ ಸಾಹಿತ್ಯದಲ್ಲಿ ವಿಶೇಷವಾಗಿ ಹದಿನೇಳನೆಯ ಶತಮಾನದಿಂದ ಮೊದಲ್ಗೊಂಡು ಇಂದಿನವರೆಗೆ ಈ ಜಾತಿಯ ಸಾಹಿತ್ಯವು ಅವಿಚ್ಛಿನ್ನವಾಗಿ ನಡೆದು ಬಂದಿದೆ. **ಕೌಪರ**(Cowper) **ಗ್ರೇ** (Gray) **ಸ್ವಿಫ್ಟ**(Swift) **ಪೋಪ** (Pope) **ಹೊರೇಸ್ ವಾಲ್‌ಪೊಲ್** (Horace Walpole) **ಲೇಡೀ ಮೇರಿ ವಾರ್ಟ್ಲೀ ಮಾಂಟೇಗ್ಯೂ**(Lady Mary Wortley Montagu) **ಕೀಟ್ಸ,** (Keats) **ಲ್ಯಾಂಬ್** (Lamb), **ಶೆಲ್ಲೀ** (Shelley), **ಬ್ರೌನಿಂಗ್** (Browning) **ಎಲಿಜಬೆಥ್ ಬ್ಯಾರೆಟ್ ಬ್ರೌನಿಂಗ್** (Elizabeth Barret Browning) **ಕೇಥರೀನ್ ಮಾನ್ಸಫೀಲ್ಡ** (Katherine Mansfield) **ಡಿ. ಎಚ್. ಲಾರೆನ್ಸ** (D. H. Lawrence), **ಬರ್ನಾರ್ಡಶಾ** (Bernard Shaw)– ಇವರೆಲ್ಲ ಪ್ರಸಿದ್ಧ ಪತ್ರ ಬರೆಹಗಾರರು; ಇವರ ಪತ್ರಗಳು ಇವರ ಇನ್ನಿತರ ಕೃತಿಗಳಷ್ಟೇ ಮಹತ್ವವುಳ್ಳವುಗಳಾಗಿವೆ. ಕೌಪರನ ಸರಳಜೀವನ, ಮುಗ್ಧ ಸ್ವಭಾವ, ನಿರಾಡಂಬರ ರೀತಿ, **ಗ್ರೇನ** ಅಭ್ಯಾಸಪೂರ್ಣ ನೋಟ, **ಪೋಪನ** ಕೃತ್ರಿಮತೆ, **ಮಾಂಟೇಗ್ಯೂ ಲೇಡಿಯ** ಕುತೂಹಲ, ಸೂಕ್ಷ್ಮನಿರೀಕ್ಷಣೆ-(ಪ್ರವಾಸ ಪತ್ರಗಳಾಗಿದ್ದು ವರ್ಣನೆಯಿಂದ ತುಂಬಿವೆ) **ಸ್ವಿಫ್ಟನ**(Letters to Stella) ಹೃದಯ ವಿದ್ರಾವಕ ಪತ್ರಗಳು, ಸಮಾಜ ಸಂಘ ಜೀವನದಲ್ಲಿ ತುಂಬ ಬೆರೆತು ಎಲ್ಲವಿಷಯಗಳನ್ನೊಳಗೊಂಡ **ಹೊರೇಸ್‌ವಾಲಪೋಲ್‌ನ** ಮನರಂಜಕ ಹರಟೆ, **ಕೀಟ್ಸನ** ಶುದ್ಧ ಕಾವ್ಯಮಯ ದೃಷ್ಟಿ, **ಶೇಲೀಯ** ಭಾವೋತ್ಕಟತೆ, **ಬೈರನ್ನನ** ಸ್ವತಂತ್ರ ಸ್ವಚ್ಛಂದ ಮನೋವೃತ್ತಿ; **ಲ್ಯಾಂಬನ** ಸಹೃದಯತೆ ವಿಲಕ್ಷಣತೆ, ದುಃಖ-ಹಾಸ್ಯಮಿಶ್ರಿತ ಶೃತಿ, **ಕ್ಯಾಥರೀನ** ಮತ್ತು **ಬ್ಯಾರೆಟಬ್ರೌನಿಂಗರವರ** ಪ್ರಣಯ ನಿವೇದನೆ, **ಲಾರೆನ್ಸ** ಮತ್ತು **ಶಾರವರ** ನಾವೀನ್ಯತೆ, ವಿಡಂಬನೆ-ವಕ್ರದೃಷ್ಟಿ ಹೀಗೆಯೇ ಇತರರ ವ್ಯಕ್ತಿತ್ವ ವಿಶೇಷವನ್ನು ಅವರವರ ಪತ್ರಗಳಲ್ಲಿ ನಾವು ಸೂಕ್ಷ್ಮವಾಗಿ ಕಾಣಬಹುದು.

ಪ್ರಕಟನೆಗಾಗಿಯೇ ಬರೆದ ಪತ್ರಗಳು ನಿರ್ದೋಷವಾಗಿರಲಾರವು. ಅವು ಒಂದು ವೇಷವನ್ನು ತೊಟ್ಟು ಒಂದು ಪಾತ್ರವನ್ನು ಅಭಿನಯಿಸಿದಂತೆ.

ಪತ್ರವು ಅಪವಾದವಿಲ್ಲದೆ ಬರೆದವನ ಅಂತರಂಗವನ್ನು ವ್ಯಕ್ತಮಾಡುತ್ತದೆಂದು ತಿಳಿಯಬಾರದು. ಪತ್ರವನ್ನು ಬರೆಯುವಾಗ ಸತ್ಯವನ್ನು ಮರೆಮಾಡಿ, ವ್ಯಕ್ತಿತ್ವವನ್ನು ಬದಿಗಿರಿಸಿ, ಅಪೇಕ್ಷಿಸಿದ ನಾಟಕವನ್ನು ಹೂಡಲು ಸಾಕಷ್ಟು ಅವಕಾಶವಿದೆ. ಪತ್ರವನ್ನು ವಿರಾಮದಲ್ಲಿ ಬರೆಯಲಾಗುವುದು; ಯಾರಿಗೆ ಬರೆಯುವೆವೋ ಅವರ ಸ್ವಭಾವ ಒಲವುಗಳು ನಮಗೆ ಪರಿಚಿತ; ಅವರ ಸದಭಿಪ್ರಾಯವನ್ನು ನಾವು ಆಶಿಸುವೆವು. ಹೀಗಾಗಿ ಪತ್ರದಲ್ಲಿ ತಿಳಿದೂ ತಿಳಿಯದ ಸೋಗಿಗೆ ಆಸ್ಪದವಿದೆ. (Samuel Johnson) **ಸಾಮ್ಯೂಯಲ್ ಜಾನಸನ್ನನು** ಈ ಅರ್ಥವನ್ನೊಳಗೊಂಡ ವ್ಯಾಖ್ಯೆಯನ್ನು ಒಂದೆಡೆ ಮಾಡಿರುವನು. ಪತ್ರದ ಶೈಲಿಯು ಸರಸ ಮಾತಿನಂತಿರಬೇಕು, ಸಲಿಗೆಯಿಂದ ತುಂಬಿರಬೇಕು, ನೇರವಾಗಿ ಹೃದಯದಿಂದ ಹೊರಹೊಮ್ಮಬೇಕು. ಆತ್ಮೀಯತೆಯೇ, ನಿಷ್ಕಾಪಟ್ಯವೇ ಪತ್ರದ ಜೀವಾಳ. ಹೆಚ್ಚು ತಿದ್ದಿ ಬರೆದ ಪತ್ರಗಳು, ಪರಿಣಾಮ ಪ್ರತಿಕ್ರಿಯೆಗಳನ್ನು ಲಕ್ಷಿಸಿ ಬರೆದವುಗಳು, ಬರಹಗಾರರ ಜಾಣ್ಮೆಯನ್ನು ತಿಳಿಸಬಹುದಾದರೂ, ಹೃದಯಶೂನ್ಯತೆಯನ್ನು ಪ್ರಕಟಿಸುವವು. ಪತ್ರವನ್ನು ಓದಿದಾಗ ಬರೆದವರ ನಿಕಟ ಸಾನ್ನಿಧ್ಯದ ಅನುಭವವಾಗಬೇಕು. ಇವು ಒಳ್ಳೆಯ ಪತ್ರದ ಲಕ್ಷಣಗಳು.

ಮೇಲೆ ಸೂಚಿಸಿದಂತೆ ನಮ್ಮ ದೇಶದಲ್ಲಿ ಪತ್ರಸಾಹಿತ್ಯದ ಅಭಾವವಿದ್ದರೂ ಇತ್ತೀಚೆಗೆ ಹಲವು ಪ್ರಸಿದ್ಧ ಭಾರತೀಯರ ಪತ್ರಗಳ ಸಂಕಲನಗಳು ಬೆಳಕು ಕಂಡಿವೆ. ಇವು ಹಲವು ಬಗೆಗಳನ್ನು ನಿದರ್ಶಿಸುತ್ತವೆ: **ಶ್ರೀನಿವಾಸ ಶಾಸ್ತ್ರಿ**ಗಳವರ ರಾಜಕೀಯ ಪತ್ರಗಳು, **ಮಹಾತ್ಮಾಜೀ**ಯವರ ರಾಷ್ಟ್ರ ಜೀವನದ ಎಲ್ಲ ಅಂಗಗಳಿಗೂ ಸಂಬಂಧಪಟ್ಟ ಪತ್ರಗಳು, **ನೆಹರೂ**ರವರು ಮಗಳಿಗೆ ಬರೆದ ಶೈಕ್ಷಣಿಕ ಪತ್ರಗಳು,- ಇವು ಒಂದು ಮಾದರಿಯವು. ಜಗತ್ತಿನಪತ್ರಸಾಹಿತ್ಯಕ್ಕೆಭಾರತೀಯರ ಕಾಣಿಕೆಯೆನ್ನಬಹುದಾದ **ರವೀಂದ್ರ**ರ ಜಾಗತಿಕ ಪ್ರವಾಸದ ಅನುಭವಗಳನ್ನು ಆಧರಿಸಿ ಬರೆದ ಪತ್ರಗಳು **ಶ್ರೀವಿವೇಕಾನಂದ**ರ, ಮತ್ತು **ಶ್ರೀಅರವಿಂದ**ರ ಆಧ್ಯಾತ್ಮಿಕ ಪತ್ರಗಳು ಪ್ರಕಟವಾಗಿವೆ. ಇವು ಆಪ್ತ ಸಲಹೆ, ಬೆಳಕು ಆನಂದಗಳನ್ನು ನೀಡುವವು. **ಶ್ರೀ ಅರವಿಂದ**ರ ನಾಲ್ಕೈದು ಪತ್ರ ಸಂಕಲನಗಳಲ್ಲಿ ಒಂದು ಸಂಕಲನವು ಕೇವಲ ಸಾಹಿತ್ಯ ಕೃತಿಗಳನ್ನು ಕುರಿತಿದ್ದಾಗಿದೆ: ಈ ಕ್ಷೇತ್ರದಲ್ಲಿ ಸಹ ಭಾರತೀಯರ ಅಭೂತಪೂರ್ವ ದೃಷ್ಟಿ ಸೃಷ್ಟಿಗಳಿಗೆ ಹೆಗ್ಗುರುತಾಗಿದೆ.

# ಬಿನ್ನಹ

ಈ ವರುಷದ ಎರಡನೆಯ ಪುಸ್ತಕವಾದ "ಮೊಪಾಸಾನ ಓಲೆಗಳು" ಕೃತಿಗೆ ಮುನ್ನುಡಿರೂಪದಲ್ಲಿ 'ಪತ್ರಸಾಹಿತ್ಯ' ಎಂಬ ಚಿಕ್ಕದಾದರೂ ಚೊಕ್ಕವಾದ ಈ ಪ್ರಬಂಧವನ್ನು ಆಂಗ್ಲ ಭಾಷಾ ಪ್ರವೀಣರಾದ ಮಿತ್ರರೋರ್ವರು (ಅವರ ಹೆಸರನ್ನು ಸೂಚಿಸಬಾರದೆಂದು ಅವರ ಆಗ್ರಹ) ಬರೆದು ನೆರವಾದುದಕ್ಕೆ ಮಾಲೆಯು ಸದಾ ಋಣಿ. ಕನ್ನಾಡ ಹಿರಿಕಿರಿಯ ಸಾಹಿತಿಗಳ ಪತ್ರಸಾಹಿತ್ಯವನ್ನು ಬೇಗನೆ ಸಂಗ್ರಹಿಸಿ ಪ್ರಕಟಿಸಬೇಕೆಂದು ಸಂಕಲ್ಪಿಸಿದ್ದೇವೆ. ಇದಕ್ಕೆ ನಮ್ಮ ಬರಹಗಾರ ಮಿತ್ರರ ಸಹಕಾರ ಅವಶ್ಯ. ಇದಕ್ಕೆ ಪೂರ್ವಭಾವಿಯಾಗಿ, ವಿಶ್ವಸಾಹಿತ್ಯದಲ್ಲಿ ಖ್ಯಾತಿವೆತ್ತ ಸಾಹಿತಿಗಳ ಓಲೆಗಳ ಸಂಗ್ರಹವನ್ನು ಕನ್ನಡಿಗರಿಗೀಯುವ ಯೋಜನೆಯೂ ಇದೆ. ಈ ಎರಡೂ ಕೋರಿಕೆಗಳನ್ನು ಬೇಗ ಈಡೇರಿಸಲೆಂದು ದೇವದೇವನಲ್ಲಿ ಪ್ರಾರ್ಥಿಸುತ್ತೇವೆ. ತಮ್ಮ ಮುಂದಿರುವ ಈ "ಮೊಪಾಸಾನ ಓಲೆಗಳ"ನ್ನು ಸಹೃದಯರು ಆದರದಿಂದ ಬರಮಾಡಿಕೊಳ್ಳುವಿರೆಂದು ಆಶಿಸುತ್ತೇವೆ.

ಸಂಪಾದಕರು



# ಗಾಯ್-ದ-ಮೋಪಾಸಾನ ಜೀವನ ಚರಿತ್ರೆ

[ ಈ ಪುಸ್ತಕದಲ್ಲಿರುವ ‘ ಓಲೆಗಳು ’ ಗಾಯ್-ದ-ಮೋಪಾಸಾನ ಜೀವನಕ್ಕೆ ಬಹುಮಟ್ಟಿಗೆ ಹೊಂದಿಕೊಂಡಿವೆ. ಇವುಗಳ ಜತೆಗೆ ಇವನ ಜೀವನದ ವಿವರಗಳನ್ನು ತಿಳಿಯುವದು ಅವಶ್ಯವೆಂದು ಬೇರೆ ಹೇಳಬೇಕಾಗಿಲ್ಲ. ೧೮೭೧ರಲ್ಲಿ ಫ್ರಾಂಕೋ-ಪ್ರಶಿಯನ್ನರ ಯುದ್ಧ ಮುಗಿದ ಮೇಲೆ, ಇದರಲ್ಲಿ ಯೋಧನಾಗಿ ಕೆಲಸ ಮಾಡಿದ. ಗಾಯ್‌ನು ಪ್ಯಾರೀಸದಲ್ಲಿ ನೌಕಾ ಕಛೇರಿಯಲ್ಲಿ ಕೆಲಸಕ್ಕೆ ತಂದೆಯ ಒತ್ತಾಯದ ಮೇರೆಗೆ ಸೇರಬೇಕಾಯಿತು. ರೋವನ್, ಏತ್ರೇ, ಹಾವ್ರೇ, ಮುಂತಾದ ಸಣ್ಣ ನಗರಗಳಲ್ಲಿ ಮತ್ತು ನಾರ್ಮಂಡಿ ಪ್ರಾಂತದ ಹಳ್ಳಿಯ ಸ್ವಚ್ಛಂದ ವಾತಾವರಣದಲ್ಲಿ ಬೆಳೆದ ಗಾಯ್‌ನಿಗೆ ಪ್ಯಾರಿಸದ ಗಡಿಬಿಡಿಯ ವಾತಾವರಣ ಬೇಸರವೆನಿಸಿತು. ಮೊದಲನೆಯ ಓಲೆ ಇವನ ನೌಕಾ ಕಛೇರಿಯ ಜೀವನವನ್ನು ವಿವರಿಸುತ್ತದೆ. ಬಾಲ್ಯ, ಮತ್ತು ವಿದ್ಯಾಭ್ಯಾಸದ ದಿನಗಳ ವಿವರಗಳನ್ನೊಳಗೊಂಡ ಇವನ ಜೀವನ ಚರಿತ್ರೆಯನ್ನು ಮಾತ್ರ ಇಲ್ಲಿ ಕೊಡಲಾಗಿದೆ, ಆನಂದ ಗ್ರಂಥಮಾಲೆಯು ಇವನ ಸಂಪೂರ್ಣ ಚರಿತ್ರೆಯನ್ನು ಪ್ರಕಟಿಸ ಬೇಕೆಂದು ನಿಶ್ಚಯಿಸಿದ ಯೋಜನೆಯಲ್ಲಿ ಇದು ಮೊದಲನೆ ಹಂತ ವೆಂದು ನನ್ನ ಅರಿಕೆ. ಇದು ಸ್ವಲ್ಪ ಸುಟ್ಟಿಗೆ ಉಡುಪಿಯ "ರಾಯಭಾರಿ" ಯಲ್ಲಿ ಹೆಚ್ಚಿನ ವಿವರಗಳೊಂದಿಗೆ ಪ್ರಕಟವಾಗಿದೆ. ಅವರಿಗೆ ನನ್ನ ವಂದನೆಗಳು.]

– ೧ –

## ಗಾಯ್-ದ-ಮೋಪಾಸಾನ ಬಾಲ್ಯ

೧೮೪೬ ನೇ ವರುಷ ರೋವೆನ್ ನಗರದಲ್ಲಿ ನವೆಂಬರದಲ್ಲಿ ಪೋಯಿಟೋವಿನ್ ಮತ್ತು ಮೋಪಾಸಾ ಮನೆತನಗಳಲ್ಲಿ ಮಹತ್ವದ ಮದುವೆ ನಡೆಯಿತು. ಲಾರಾ ಪೋಯಿಟೋವಿನ್‌ಳಿಗೂ ಮೋಪಾಸಾ ಮನೆತನದ ಗುಸ್ತವನಿಗೂ ಆದ ಮದುವೆಯ ಪರಿಣಾಮವಾಗಿಯೇ ೧೮೫೦ರಲ್ಲಿ ಜಗದ್ವಿಖ್ಯಾತ ಕತೆಗಾರನಾದ ಗಾಯ್-ದ-ಮೋಪಾಸಾನ ಜನನವಾಯಿತು. ಈ ನವ ದಂಪತಿಗಳು ಇಬ್ಬರೂ ಮನೆತನದಿಂದ ಶ್ರೀಮಂತರಿದ್ದರು. ಆದರೆ ಗೂಸ್ತವನ ದುಂದುಗಾರಿಕೆಯ ಜೀವನದ ಪರಿಚಯು ಲಾರಾಳ ತಾಯಿಗೆ ಮೊದಲೇ ತಿಳಿದು ಬಂದುದರಿಂದ ತನ್ನ ಸ್ವಂತ ಆಸ್ತಿಯನ್ನು ಮನೆತನದ

ಮಗನಾದ ಆಲ್‌ಫ್ರೇಡನಿಗೆ ಕೊಡದೆ, ತನ್ನ ಪ್ರೀತಿಯ ಪುತ್ರಿಯಾದ ಲಾರಾಳ ಸ್ವಂತ ಉಪಯೋಗಕ್ಕೆಂದು ಆಸ್ತಿಯನ್ನು ಬರೆದಿಟ್ಟಳು. ಇದಕ್ಕೆ ಲಾರಾಳ ಅಣ್ಣನಾದ ಆಲ್‌ಫ್ರೇಡ್‌ನ ಒಪ್ಪಿಗೆದೊರೆಯಿತು. ಇದರಿಂದ ಲಾರಾಳ ತಾಯಿಗೆ ಮಾನಸಿಕ ಸಮಾಧಾನ ದೊರೆಯಿತಲ್ಲದೆ, ಲಾರಾಳಿಗೆ ತನ್ನವರಲ್ಲಿ ಅಮಿತ ಭಕ್ತಿ, ವಿಶ್ವಾಸ, ಪ್ರೇಮ, ಆದರ ನೆಲೆಗೊಳ್ಳಲು ಕಾರಣವಾಯಿತು. ಗಾಯ್‌ನು ತಾಯಿಗರ್ಭದಲ್ಲಿರುವಾಗ ಅವನಲ್ಲಿ ತಾಯಿಕಡೆಯ ಅನೇಕ ಸದ್ಗುಣಗಳು ಬೇರೂರಲು ಈ ವಾತಾವರಣವೇ ಕಾರಣವಾಯಿತೆನ್ನ ಬಹುದು.

ಬಾಲಕನಾದ ಗಾಯ್‌ನ ಜನ್ಮಸ್ಥಾನ ಬಹು ರಮಣೀಯವಾದುದು. ವಿತ್ರೀ ಉಪ-ನಗರದ ಉದ್ಯಾನವನದಿಂದ ಸುಂದರ ಸನ್ನಿವೇಶಗಳಲ್ಲಿ ನಿರ್ಮಿತವಾದ ಲಾರಾಳ ತವರುಮನೆಯಲ್ಲಿ ಗಾಯ್‌ನ ಜನನವಾಯಿತು. ಜನನವಾದಕೂಡಲೇ ತಾಯಿಮಕ್ಕಳನ್ನು ಲಾರಾಳ ಗಂಡನ ಮನೆಗೆ ಕರೆದೊಯ್ದರಂತೆ. ಗಂಡು ಸಂತಾನವಾಯಿತೆಂದು ಹಿಗ್ಗಿದ ಲಾರಾ ಅವನನ್ನೋರ್ವ ಆದರ್ಶ ಪುರುಷನಾಗುವಂತೆ ಬೆಳಸಬೇಕೆಂದು ನಿಶ್ಚಯಿಸಿದಳು. ಅದೇ ಆಸೆಯಿಂದಲೇ ಮಗುವನ್ನು ಅತಿ ಅಕ್ಕರೆಯಿಂದ ಲಾಲನೆ ಪಾಲನೆ ಮಾಡಿದಳು. ಲಾರಾಳು ಗಾಯ್‌ನ ಮರಣಾನಂತರ, ತನ್ನ ಹಿರಿಯ ಮಗನು ಹೀಗೆ ಬುದ್ಧಿಶಾಲಿಯಾಗಲು ಕಾರಣವೇನೆಂದು ಕೇಳಿದಾಗ ಅವಳು ನಸುನಕ್ಕು ಮಗನು ಜನನವಾದ ಮೊದಲನೇ ದಿನದಲ್ಲಿಯೇ ಅವನ ತಲೆಯನ್ನು ಡಾಕ್ಟರನು ದುಂಡಾಗಿಸುತ್ತ ಆಡಿದ ಮಾತುಗಳನ್ನು ಎಲ್ಲರಿಗೂ ಹೇಳಿದಳಂತೆ. “ಇಲ್ಲಿ ನೋಡು ಲಾರಾ, ನಿನ್ನ ಮಗುವಿನ ತಲೆಯನ್ನು ಇಲ್ಲಿ ಹಿಂಬದಿಯಲ್ಲಿ, ಕೊಂಚ ಸಮವಾಗಿ ದುಂಡಾಗುವಂತೆ ಮಾಡುವೆನು. ಇದರಿಂದ ಇವನು ಬಲು ಬುದ್ಧಿಶಾಲಿಯಾಗುವನೆಂಬದರಲ್ಲಿ ಸಂದೇಹವಿಲ್ಲ. ಇವನು ಪ್ರಖ್ಯಾತ ಪುರುಷನಾಗುವನೆಂಬ ನಂಬಿಕೆ ನನಗೆ ಪೂರ್ಣ ಇದೆ” ಎಂದು ಹೇಳಿದ ಡಾಕ್ಟರನ ಮಾತುಗಳು ಲಾರಾಳಿಗೆ ಹೆಚ್ಚಿನ ಆನಂದವನ್ನು ತಂದೊಡ್ಡಿದವು.

ಬಾಣಂತಿ ಲಾರಾ ತನ್ನ ತಂದೆಯ ಮನೆಯಲ್ಲಿರಲು ಹೆಚ್ಚು ಅನುಕೂಲವಾಗಿರಲಿಲ್ಲ. ಅಲ್ಲಿಯ ಕಾಗೆಗಳ ಕೂಗಾಟ, ಜನರ ಗಡಿಬಿಡಿ, ಗೊಂದಲ, ಲಾರಾಳಲ್ಲಿ ಒಂದುರೀತಿಯ ಮಾನಸಿಕ ಗೊಂದಲವನ್ನು ಉಂಟುಮಾಡಲು

ವಿತ್ರೇದ ಹತ್ತಿರವೇ ಇದ್ದ ( Chateau blanc ) ಛೋಟೋ ಬ್ಲಾನ್ ಎಂಬಲ್ಲಿ ಇರತೊಡಗಿದಾಗ ಅವಳಿಗೆ ೧೮೫೬ ರಲ್ಲಿ ಎರಡನೆಯ ಗಂಡುಮಗು ಜನನವಾಯಿತು. ಅವನ ಹೆಸರು ಹಾರ್ವೇ. ವಿತ್ರೇ ನಗರದ ಸುತ್ತಲಿನ ವಾತಾವರಣ, ಈ ಎರಡು ಮನೆಗಳಲ್ಲಿ ವಾಸ, ಬಾಲಕನಾದ ಗಾಯ್‌ನು ಪ್ರಕೃತಿಯ ಬಯಲಿನಲ್ಲಿ ಬೆಳೆಯುವಂತೆ ಅನುವುಮಾಡಿಕೊಟ್ಟಿತಲ್ಲದೆ, ಅವನನ್ನು ಅತ್ಯಂತ ನಿಸರ್ಗೋಪಾಸಕನಾಗಲು ಸಹಾಯವಾಯಿತೆಂಬುದು ಮುಖ್ಯ ವಿಷಯವಾಗಿದೆ. ಇವನ ಅನೇಕ ಕತೆ-ಕಾದಂಬರಿಗಳಲ್ಲಿ ನಾವು ಕಾಣುವ ಪ್ರಕೃತಿಯ ಸುಂದರ ಸನ್ನಿವೇಶಗಳು, ನದೀ ತೀರದ ನೋಟಗಳು, ಸಮುದ್ರ ತೀರ ವಾಸಿಗಳ ಜೀವನದ ಚಿತ್ರಗಳು, ಹಳ್ಳಿಯ ಆಟ-ಪಾಟಗಳ ವಿವರಗಳು, ಮುಂತಾದವು ಇವರ ಪರಿಣಾಮವೆಂದು ಊಹಿಸಬಹುದು. ಇವನು ಬಾಲ್ಯದಲ್ಲಿ ಇರುತ್ತಿದ್ದ ಮನೆಯ ವರ್ಣನೆ,ಒಂದು ಕಣ್ಣೆದುರು ನಡೆದ ಚಿಕ್ಕ ದೃಶ್ಯ, ಗಾಯ್‌ನು ಕ್ಲೋಛೇ ( Chochette ) ಎಂಬ ಕಥೆಯಲ್ಲಿ ಎಲ್ಲ ವಿವರಗಳೊಂದಿಗೆ ವರ್ಣಿಸಿರುವನು. ಕೇವಲ ಹುಡುಗನಿದ್ದಾಗ ನಡೆದು ಹೋದ ತನ್ನ ಮನೆಯ ಮುದುಕಿಯ ಅಕಾಲಿಕ ಅನಿರೀಕ್ಷಿತ, ಮರಣದಿಂದ ತನ್ನ ಮತ್ತು ಮನೆಯವರ ಮೇಲೆ ಉಂಟಾದ ಪರಿಣಾಮದ ಎಲ್ಲ ವಿವರಗಳನ್ನು ಅತಿಸೂಕ್ಷ್ಮರೀತಿಯಿಂದ ಮನಕರುಗುವಂತೆ ಈ ಕತೆಯಲ್ಲಿ ವರ್ಣಿಸಿರುವನು ಗಾಯ್‌ನು ತನ್ನ ಜೀವನದ ಅನೇಕ ಸನ್ನಿವೇಶಗಳ ವಿವರಗಳನ್ನು ತನ್ನ ಕತೆಗಳಿಗೆ ಉಪಯೋಗಿಕೊಳ್ಳುವ ಜಾಣ್ಮೆ, ಸತ್ಯ ಚಿತ್ರಗಳನ್ನೂ ನಿರೂಪಿಸುವುದರಲ್ಲಿ ಅವನಿಗಿದ್ದ ಬಯಕೆ ಆಕಾಂಕ್ಷೆ, ಮುಂತಾದವುಗಳು ನಮ್ಮ ಕಣ್ಣೆದುರು ಬಂದು ನಿಲ್ಲುತ್ತವೆ. ಗಾಯ್‌ನೇ ಬರೆದ ಮತ್ತೊಂದು ಕತೆ ಬೆಕ್ಕಿನ ಸಾವನ್ನು ಕುರಿತುದು. ಕುತ್ತಿಗೆ ಹಿಚುಕುವ ಪ್ರಸಂಗದ ವಿವರಗಳನ್ನು ಅರಿಯಲು ಇವನು ಚಿಕ್ಕವನಿದ್ದಾಗ ಒಂದು ಬೆಕ್ಕಿನ ಮರಿಯು, ಒಡ್ಡಿದ ಬಲೆಯಲ್ಲಿ ಸಿಕ್ಕಬಿದ್ದು, ಕುತ್ತಿಗೆಗೆ ಬಿದ್ದ ಉರುಲನು ತಪ್ಪಿಸಿ ಕೊಳ್ಳಲಾಗದೆ, ಮೆಲ್ಲಮೆಲ್ಲನೆ ಅದು ಪ್ರಾಣವನ್ನು ಬಿಟ್ಟ ವಿವರಗಳನ್ನು ಚಿತ್ರಿಸಿರುವನು. ತನ್ನ ಕತೆಗಳಲ್ಲಿ ಇಂತಹ ಕರುಣಾರಸಪೂರಿತ ಸನ್ನಿವೇಶಗಳನ್ನು ಯಾವ ವಿವರವನ್ನು ಬಿಡದೆ ಚಿತ್ರಿಸುವ ಉತ್ತಮ ಕಲೆಯು ಗಾಯ್‌ನಿಗೆ ಕರಗತವಾಗಿತ್ತು.

ಬಾಲ್ಯದಲ್ಲಿ ಇವನಿಗೆ ಸಾಹಿತ್ಯ ಅಭಿರುಚಿ ಯುಂಟಾಗಲು ಕಾರಣರಾದ ವರೆಂದರೆ, ಲಾಲನೆ ಪಾಲನೆಗಳಿಂದ ಭಕ್ತಿ ಆದರಗಳನ್ನು ಗಳಿಸಿದ ತಾಯಿಲಾರಾ ಮತ್ತು ತನ್ನ ತಾಯಿಯ ಮನೆತನಕ್ಕೆ ತೀರ ಹತ್ತಿರದ ಮಿತ್ರರಾದ ಗೂಸ್ತವ್ ಫ್ಲಾಬೇರರು. ಇವರಿಬ್ಬರೂ ಗಾಯ್‌ನ ಸೋದರ ಮಾವನಾದ ಆಲ್‌ಫ್ರೇಡ್ ಪೋಯಿಟೋವಿನ್‌ರ ಬಗ್ಗೆ ಹೆಚ್ಚಿನ ಆದರವನ್ನು ತಳೆದಿದ್ದರು. ಈ ಪೋಯಿ ಟೋವಿನ್‌ನ ಅನೇಕ ಗುಣಗಳೇ ಗಾಯ್‌ನಲ್ಲಿ ಕಂಡುಬರುತ್ತಿವೆಯೆಂದು ಲಾರಾಳೇ ತನ್ನ ಮಿತ್ರರೆದುರು ಹೇಳಿಕೊಂಡು ಹೆಮ್ಮೆ ಪಟ್ಟುಕೊಂಡಿದ್ದುಂಟು. ವಿಲಾಸ ಪ್ರಿಯನಾದ ತಂದೆಯ ಗುಣಗಳು ಇವನಲ್ಲಿ ಹೆಚ್ಚು ಕಾಣದಿದ್ದರೂ ಅವನಿಂದ ಸುಂದರ ದೇಹದಾರಢ್ಯ, ಎತ್ತರವಾದ ಆಕೃತಿ, ಮುಂತಾದವುಗ ಳನ್ನು ಪಡೆದವನಾಗಿದ್ದ.

ಗಾಯ್‌ನಿಗೆ, ನಿರ್ಬಂಭದಲ್ಲಿ ವಿದ್ಯಾಭ್ಯಾಸ ಮಾಡುವುದೆಂದರೆ ಬಲು ಬೇಸರ. ಅವನು ಧರ್ಮಪ್ರಚಾರಕರಿಂದ ನಡೆಸಲ್ಪಟ್ಟ ಪ್ರಾಥಮಿಕ ಶಾಲೆಗಳಿಗೆ ಹೋದುದು ಸ್ವಲ್ಪೇ ಸಮಯ. ಅವನು ಬಯಸುತ್ತಲಿದ್ದುದು ಸರ್ವ ವಿಧಧ ಸ್ವಾತಂತ್ರ್ಯ. ಬಾಲಕರಲ್ಲಿರಬೇಕಾದ ಉತ್ಸುಕತೆ, ತಿಳಿಯದ ವಿಷಯಗಳ ನ್ನರಿಯುವ ಆತುರತೆ, ಮುಂತಾದವುಗಳೆಲ್ಲವೂ ಇವನಲ್ಲಿ ಕಂಡು ಬಂದರೂ, ಶಾಲೆಗೆ ಹೋಗೆಂದು ಬಲವಂತ ಮಾಡಿದಕೂಡಲೇ ಅವನ ಉತ್ಸಾಹವೆಲ್ಲವೂ ಮಾಯವಾಗುತ್ತಿತ್ತು. ಆದರೂ ತಾಯಿಯ ಒತ್ತಾಯಕ್ಕೆ ಅವನು ಶಾಲೆಗೆ ಹೋದಾಗ ಅಲ್ಲಿಯ ಕೃತ್ರಿಮ ವಾತಾವರಣ, ಆ ದೇವಮಂದಿರದ ಶಾಲೆಗಳಲ್ಲಿ ನಡೆಯುತ್ತಲಿದ್ದ ಅನಾಚಾರ, ಹೇಯ ಜೀವನ, ಇವನ ಎಳೆಮನಸ್ಸಿಗೆ ಹೆಚ್ಚಿನ ಬೇಸರವನ್ನುಂಟು ಮಾಡಲು ಇಂತಹ ಶಾಲೆಗಳಿಗೆ ಕಳಿಸಬೇಡೆಂದು ತಾಯಿಯನ್ನು ಬೇಡಿಕೊಂಡ. ಇದರ ಚಿತ್ರವನ್ನು "ಹೆಣ್ಣಿನ ಜೀವನ" (Woman's life) ಎಂಬ ಕಾದಂಬರಿಯಲ್ಲಿ ಬಲು ಚನ್ನಾಗಿ ಚಿತ್ರಿಸಿ ರುವನು. ಇಂತಹ ನಿದರ್ಶನಗಳನ್ನು ನಾವು "ಬೆಳುದಿಂಗಳಿನಲ್ಲಿ" (In the Moonlight) ಪ್ರೇಮ (Love) ಮತ್ತು ಇನ್ನಿತರ ಕತೆಗಳಲ್ಲಿ ಕಾಣ ಬಹುದು. ತಾನು ಕಂಡ, ಕೇಳಿದ, ಹೇಯ ಚಿತ್ರಗಳನ್ನು ಅಲ್ಲಗಳೆದು ಅವು ಗಳನ್ನು ವಿರೋಧಿಸುವ ಸ್ವಭಾವ ಇವನಲ್ಲಿ ಸಣ್ಣವಯಸ್ಸಿನಿಂದಲೇ ಬೆಳೆದು

ಬಂದಿತು. ತನಗೆ ಕೈಮೀರಿದ ಕೆಲಸವಾದರೂ, ಅಸತ್ಯದ ಖಂಡನೆಯೆಂದರೆ ಮುನ್ನುಗ್ಗುತ್ತಿದ್ದ ನೆಂಬುದಕ್ಕೆ ಇವನ ಜೀವನದಲ್ಲಿ ಅನೇಕ ಉತ್ತಮ ನಿದರ್ಶನ ಗಳನ್ನು ನಾವು ಕೊಡಬಹುದು. ಒಂದುದಿನ ಓರ್ವ ಶ್ರೀಮಂತಳ ಮನೆಗೆ ಉಪ ಹಾರಕ್ಕೆ ಹೋದಾಗ ಬಡವರು ಅನೀತಿವಂತರು, ಅನೃತವನ್ನಾಡುವವರೆಂದು ಆಕೆ ತೆಗಳಿದಾಗ ನಿಮ್ಮ ಶ್ರೀಮಂತ ಮನೆತನಗಳ ನಡೆವಳಿಕೆಗಳಿಗಿಂತಲೂ ನನಗೆ, ಆ ಬಡಜನರ ಜೀವನದಲ್ಲಿ ಹೆಚ್ಚು ನಿರ್ಮಲತೆ, ಪ್ರೇಮ, ಆದರ, ಮುಂತಾದವುಗಳು ಕಂಡು ಬರುತ್ತಿವೆ, ಎಂದು ಪ್ರತಿಭಟಿಸಿ, ಆ ತಾಯಿ ಕ್ಷಮೆ ಬೇಡುವವರೆಗೆ ಅವನು ಫಲಹಾರ ಮಾಡಲಿಲ್ಲವೆಂಬ ವಿಷಯ ಚಿಕ್ಕಂದಿನಿಂದ ಇವನಲ್ಲಿ ಮನೆಮಾಡಿಕೊಂಡ ವಿಶ್ವಪ್ರೇಮದ ನಿದರ್ಶನವೇ ಸರಿ.

ಇವನು ಸ್ವಾತಂತ್ರ ಪ್ರಿಯನೆಂಬುದಕ್ಕೆ ಮತ್ತೊಂದು ನಿದರ್ಶನವನ್ನು ಕೊಡಬಹುದು. ಓರ್ವ ಶ್ರೀಮಂತಳ ಮನೆಯ ಆಮಂತ್ರಣಕ್ಕೆ ಹೋಗ ಬೇಕೆಂದು ತಂದೆ ಅವಸರ ಪಡಿಸಿದ. ಆದರೆ ಗಾಯ್‌ನು ಕಾತರಗೊಳ್ಳದೆ ನಿಧಾನವಾಗಿ ತನ್ನ ಅರಿವೆಗಳನ್ನು ಧರಿಸುತ್ತಲಿದ್ದ. ತಂದೆ ಹೆಚ್ಚು ಅವಸರ ಪಡಿಸಲು ಅವನು "ತಂದೆಯವರೇ, ನೀವು ಇಷ್ಟೇಕೆ ಅವಸರ ಪಡುವಿರಿ? ನಾನು ಬೇಗ ಬರಬೇಕಾದರೆ ನನ್ನ ಬೂಟುಗಳ ಲೇಸನ್ನು ತಾವು ಬೇಗ ಕಟ್ಟಬೇಕಾಗಲಿ. ನನಗೂ ಕೊಂಚ ಸ್ವಾತಂತ್ರ್ಯವಿರಲಿ. ಆ ಶ್ರೀಮಂತಳ ಮನೆಗೆ ಹೋಗಲು ನನಗಿಂತಲೂ ನಿಮಗೇ ಹೆಚ್ಚು ಆತುರವಿದ್ದಂತೆ ಕಂಡು ಬರುತ್ತದೆ. ಬೇಕಾದರೆ ನೀವು ಹೊರಡಿ. ನಾನು ಹಿಂದಿನಿಂದ ಬರುವೆ". ಎಂದು ಹೇಳಿಬಿಡುವ ನಿಸ್ಸಂಕೋಚದ ಸ್ವಭಾವ ಇವನದಾಗಿತ್ತು. ಇಂತಹ ಘಟನೆಗಳು ಆಗಾಗ್ಗೆ ನಡೆಯುತ್ತಲೇ ಇದ್ದವು. ಈ ಕಾರಣದಿಂದ ತಂದೆ ಮಕ್ಕಳಲ್ಲಿರಬೇಕಾದ ಪ್ರೇಮ, ಆದರ, ವಿಶ್ವಾಸಗಳು ಮೆಲ್ಲಮೆಲ್ಲನೆ ಮಾಯ ವಾಗ ತೊಡಗಿ, ಗಾಯ್‌ನು ತನ್ನ ತಾಯಿಯೇ ಪ್ರತ್ಯಕ್ಷ ದೈವವೆಂದು ಭಾವಿಸಿದ. ಅವಳನ್ನು ಸಾಯುವವರೆಗೂ ಅತ್ಯಂತ ಭಕ್ತಿ–ಗೌರವಗಳಿಂದ ಪೂಜಿಸಿದ.

ವಯಸ್ಸಾದಂತೆಲ್ಲ ಲಾರಾಗೆ ಯೋಚನೆ ಹೆಚ್ಚಿತು. ಧರ್ಮಾಧಿ ಕಾರಿಗಳಿಂದ ನಡೆಸಲ್ಪಟ್ಟ ಶಾಲೆಗೆ ಹೋಗುವುದು ಬೇಡಾದರೂ

ಅವನನ್ನು ತನ್ನೂರ ಹತ್ತಿರವೇ ಇದ್ದ ಹಳ್ಳಿಯ ಶಾಲೆಗೆ ಹೋಗಲು ಮಗನನ್ನು ಒಪ್ಪಿಸಿದಳು. ಇಲ್ಲಿಯೂ ಧರ್ಮದ ಬಗ್ಗೆ ಪಾಠಗಳನ್ನು ಹೇಳುತ್ತಿದ್ದರೂ, ಮನೆಯಲ್ಲಿ ಇವನ ಸಾಹಿತ್ಯ ಅಭಿರುಚಿಗೆ ಅನುಕೂಲವಾದ ವಾತಾವರಣವನ್ನು ಕಲ್ಪಿಸಿಕೊಟ್ಟು, ಬಹಳ ಅಚ್ಚುಕಟ್ಟಿನಿಂದ ಜೀವನವನ್ನು ನಡೆಸಿದಳು. ಮಕ್ಕಳಿಬ್ಬರಲ್ಲಿ ಒಳ್ಳೆಯ ಗುಣಗಳು ನೆಲೆಗೊಳ್ಳುವಂತೆ ಶ್ರಮವಹಿಸಿದಳು. ಸನಾತನಿಗಳೆಂದರೆ ಅವಳಿಗೆ ಬೇಸರ. ಆದರೆ, ಸಮಾಜವನ್ನು ಧಿಕ್ಕರಿಸಿ ದೂರಿರುವುದು ಅವಳಿಂದ ಆಗದ ಕೆಲಸ. ಮಕ್ಕಳಿಬ್ಬರೂ ಹಿರಿಯ ಗುರಿಯನ್ನಿಟ್ಟುಕೊಂಡು ಬಾಳಿ, ಬೆಳೆದು, ಕೀರ್ತಿಗಳಿಸಿ, ವಿಖ್ಯಾತರಾಗಬೇಕೆಂಬುದು ಅವಳ ಆಶೆಯಾಗಿತ್ತು.

ಈ ಸಮಯಕ್ಕೆ (೧೮೫೨) ಲಾರಾಳ ಅಣ್ಣ ಆಲ್‌ಫ್ರೇಡ್‌ನು ಮರಣ ಹೊಂದಿದ. ಇಲ್ಲಿಯವರೆಗೂ ಇವರ ಮನೆತನದ ಪರಮ ಮಿತ್ರನೂ ಮತ್ತು ಹಿತೈಷಿಯಾದ ಗೊಸ್ತವ್ ಫ್ಲಾಬೇರನು ಈ ಸಾವಿನ ನಂತರ ಲಾರಾಳಿಗೆ ಪ್ರತಿಯೊಂದು ವಿಷಯದಲ್ಲಿಯೂ ಸಲಹೆ ಸೂಚನೆಗಳನ್ನೀಯುತ್ತ ಬಂದ. ಹೀಗಾಗಿ ಲಾರಾನ ಮಕ್ಕಳ ಮೇಲೆ ಫ್ಲಾಬೇರನ ಪ್ರೇಮಾದರ ದೃಷ್ಟಿ ಬೀಳತೊಡಗಿತು. ಫ್ಲಾಬೇರನಿಗೆ ಆಲ್‌ಫ್ರೇಡ್‌ನೆಂದರೆ ಪರಮ ವಿಶ್ವಾಸ. ಅವನ ಮರಣದ ನಂತರ ತನ್ನ ಸ್ನೇಹಿತನ ತಂಗಿಯಾದ ಲಾರಾಳಿಗೆ ಸರ್ವವಿಧದಲ್ಲಿಯೂ ಮಾರ್ಗದರ್ಶಕನಾಗುವುದು ಸ್ವರ್ಗೀಯನಾದ ತನ್ನ ಮಿತ್ರನಿಗೆ ಹಿತಕರವಾದ ವಿಷಯವೆಂದು ನಂಬಿದ. ಗಾಯ್‌ನಲ್ಲಿ ಆಲ್‌ಫ್ರೇಡ್‌ನ ಅನೇಕ ಗುಣಗಳನ್ನು ಕಂಡುಕೊಂಡ. ೧೮೫೬ ರಲ್ಲಿ ಲಾರಾಳ ತಾಯಿಯು ಇಹಲೋಕದ ಯಾತ್ರೆ ಮುಗಿಸಲು, ಫ್ಲಾಬೇರನು ತನ್ನ ಮಿತ್ರಳಿಗೆ ಉಂಟಾದ ದುಃಖದಲ್ಲಿ ಸಮಭಾಗಿಯಾದ. ಅದೇ ವರುಷ ಅವನು ತನ್ನ ನೂತನ ಜಗದ್ವಿಖ್ಯಾತ ಕಾದಂಬರಿ 'ಮದಾಂ ಬಾವರಿ' (Madame Bavary) ಯನ್ನು ಪ್ರಕಟಿಸಿ ಅಗಲಿಹೋದ ಆಲ್‌ಫ್ರೇಡ್‌ನಿಗೆ ಅಂಕಿತಮಾಡಿ ಈ ಮನೆತನಕ್ಕೆ ತನ್ನ ವಿಶ್ವಾಸ ವೆಂತಹದೆಂಬದನ್ನು ಜಗತ್ತಿಗೆ ತಿಳಿಯ ಪಡಿಸಿದ.

ತಾಯಿಯ ಸಾವು ಅನಾಥೆಯಾದ ಲಾರಾಳನ್ನು ಅಧೀನಗೊಳಿಸಲಿಲ್ಲ. ಅವಳಲ್ಲಿ ಹೊಸ ಚೇತನವು ರೂಪುಗೊಂಡಿತು. ಅವಳೆದೆ ಗಟ್ಟಿಯಾಯಿತು.

ಧೈರ್ಯವು ಮೂರ್ತಿಮತ್ತಾಗಿ ನಿಂತಿತು. ವಿಪತ್ತುಗಳನ್ನು ಎದುರಿಸುವ ನೂತನ ಶಕ್ತಿ ಅವಳಲ್ಲಿ ಕಾಣಿಸಿಕೊಂಡಿತು.

ಗಂಡನೊಂದಿಗೆ ಸಮ್ಮತಿಯು ದಾಂಪತ್ಯ ವಿಚ್ಛೇದನದಿಂದ ಆಗಲೇ ಕಲ್ಲಾಗಿದ್ದ ಅವಳ ಎದೆ ತಾಯಿಯು ಮರಣದ ನಂತರ ಮತ್ತಿಷ್ಟು ಧೈರ್ಯವನ್ನು ತಾಳಿತು. ಎಂತಹ ಎಡರುಗಳು ಬಂದರೂ, ನೋವು ತಾಪಗಳನ್ನು ಎಣಿಸದೆ, ಎದುರಿಸುವ ಶಕ್ತಿ ಅವಳಲ್ಲಿ ಉದ್ಭವಿಸಿತು. ತನ್ನೆರಡು ಮಕ್ಕಳ ಆರೈಕೆಗಾಗಿ ತಾನು ಧೀರಳಂತೆ ಬಾಳಿ ಅವರ ಜೀವನವನ್ನು ರೂಪಿಸುವದೇ ತನ್ನ ಆದ್ಯ ಕರ್ತವ್ಯವೆಂದು ಬಗೆದಳು. ಮಕ್ಕಳಿಗಾಗಿ ತಾನು ಜೀವಿಸಬೇಕಾಗಿದೆಯೆಂದು ನೆನೆದಳು. ಹಿರಿಯವನಾದ ಗಾಯ್‌ನು ತನ್ನ ಗಿಜನೇ ವಯಸ್ಸಿನಲ್ಲಿಯೇ ಸುಂದರವಾದ ದೇಹಾಕೃತಿಯಿಂದ, ದೊಡ್ಡ ಯೋಧನಂತೆ ಕಾಣುತ್ತಿದ್ದುದು ಅವಳಿಗೆ ಹೆಮ್ಮೆ ಎನಿಸಿತು. ಇವನು ಜಾಣನೂ, ಜ್ಞಾನಿಯೂ, ಸೂಕ್ಷ್ಮ ಬುದ್ಧಿಯವನೂ ಆಗಿರುವುದು, ತನ್ನ ಅಣ್ಣನಂತೆ ಸಾಹಿತ್ಯ ಪ್ರಿಯನಾಗುತ್ತಿರುವುದು ಲಾರಾಳಿಗೆ ಹೆಚ್ಚಿನ ಆನಂದವನ್ನುಂಟುಮಾಡಿತು.

ಮುಂದೆ ತನ್ನ ಮಗನಾದ ಗಾಯ್‌ನನ್ನು ಆ ಹಳ್ಳಿಯ ಹವೆಯಿಂದ ಬದಲಾಯಿಸಬೇಕಾಯಿತು. ಅಲ್ಲಿ ಅವನ ದೇಹಾರೋಗ್ಯ ಚೆನ್ನಾಗಿರಲಿಲ್ಲವಾದ್ದರಿಂದ ಮನೆಯಲ್ಲಿಯೇ ಅವನನ್ನು ಆರೈಸಿದಳು. ಹೀಗೆ ಎರಡನೆಯ ಸಲ ಶಾಲೆಯ ನಿರ್ಬಂಧ ಜೀವನದಿಂದ ದೂರಾಗಲು ಗಾಯ್‌ನು ಬಹಳ ಹರುಷದಿಂದ ಮನೆಯಲ್ಲಿಯೇ ತನ್ನ ಮುಂದಿನ ವಿದ್ಯಾಭ್ಯಾಸವನ್ನು ಮುಂದುವರಿಸಿದ. ತಾಯಿಯ ಮುಖಾಂತರ ಎಲ್ಲವನ್ನೂ ತಿಳಿದುಕೊಂಡ. ಈ ವಯಸ್ಸಿನಲ್ಲಿ ಮನೆಯಲ್ಲಿ ಸಾಹಿತ್ಯ, ಸಾಂಸ್ಕೃತಿಕ, ಸನ್ಮಾರ್ಗದ ವಾತಾವರಣವನ್ನು ಕಲ್ಪಿಸಿಕೊಟ್ಟು, ಅವನನ್ನು ಸದಾ ಸದ್ಗುಣಿಯಾಗುವಂತೆ ನೋಡಿಕೊಂಡು ಗಾಯ್‌ನಿಗೆ ಸರ್ವವಿಧದಲ್ಲಿಯೂ ನೆರವಾದಳು. ತನ್ನಲ್ಲಿ ಕಾವ್ಯಪ್ರೇಮವು ಅಂಕುರಿಸಲು ಕಾರಣಳು ಆ ಮಹಾ ತಾಯಿಯೇಯೆಂದು ಗಾಯ್‌ನು ಅನೇಕ ಸಲ ಒಪ್ಪಿಕೊಂಡಿರುವನು. ಮೇಲೆ ಹೇಳಿದಂತೆ ಅವಳ ಋಣವನ್ನು ಈ ಜನ್ಮದಲ್ಲಿ ತೀರಿಸಲಾರೆನೆಂದು ಎಷ್ಟೋ ಸಲ ಹೇಳಿಕೊಂಡಿರುವನು.

ಈ ಬಗೆಯ ಆರೈಕೆಯಿಂದ ಗಾಯ್‌ನಿಗೆ ಹೆಣ್ಣು ಒಂದು ದೇವತಾ ಸ್ವರೂಪವಾಗಿ ಕಂಡುಬಂತು. ಅದು ಅವನಿಗೆ ಆಕರ್ಷಕವಸ್ತುವಾಗಲಿಲ್ಲ. ಹೆಣ್ಣೆಂದರೆ ಅವನಿಗೆ ಹೆಚ್ಚು ಆದರ. ಜಗತ್ತು ಹೆಣ್ಣಿನ ಬಗ್ಗೆ ತಾಳುತ್ತಿದ್ದ ಭಾವನೆ, ವಿಲಾಸಿಗಳು ಅವರನ್ನು ನೋಡುವರೀತಿ, ಶ್ರೀಮಂತರು ಇವರ ಮೇಲೆ ನಡೆಯಿಸುವ ಪುಂಡಾಟಿಕೆ, ಮುಂತಾದವುಗಳನ್ನು ಕಂಡು ಹೆಣ್ಣಿನ ಜೀವನವನ್ನು ಸುಧಾರಿಸಲು ಹೆಣಗುವುದೇ ಜೀವನಲ್ಲಿ ತನ್ನ ಮುಖ್ಯಕರ್ತವ್ಯ ವೆಂದು ಬಗೆದ. ಈ ಬಗೆಯ ಭಾವನೆ ಅವನಲ್ಲಿ ಉಂಟಾಗಲು, ತಾನು ದಿನವೂ ಕಾಣುತ್ತಿದ್ದ ತನ್ನ ಸ್ವಂತ ತಾಯಿಯ ಜೀವನದ ದುಃಖಮಯ, ಯಾತನೆಯ, ವೇದನೆಯ, ಸನ್ನಿವೇಶಗಳೇ ಕಾರಣವಾದವೆನ್ನಬಹುದು. ಆದುದರಿಂದಲೇ ಅವನ ಅನೇಕ ಕತೆಗಳು ಹೆಣ್ಣಿನ ಪರವಾಗಿ ವಕೀಲಿವಹಿಸಿ ಬರೆದಂತೆ ಕಂಡುಬರುತ್ತದೆ.

೧೮೬೭ ನೆಯ ವರುಷ ಗಾಯ್‌ನ ಜೀವನದಲ್ಲಿ ಮಹತ್ವದ್ದೆಂದು ಹೇಳ ಬಹುದು. ಕ್ರೋಸಿಯೋದಲ್ಲಿ ವಿಶ್ರಾಂತಿಗೆಂದು ಬಂದ ಫ್ಲಾಬೇರನನ್ನು ಗಾಯ್‌ನು ಮೊದಲುಸಾರಿಕಂಡ. ಅಂದು ಈ ಹುಡುಗನನ್ನು ಕಂಡ ಫ್ಲಾಬೇ ರನು ಚಕಿತನಾದ. ಗತಿಸಿಹೋದ ತನ್ನ ಮಿತ್ರ ಆಲ್‌ಫ್ರೇಡನು ತನ್ನೆದುರು ಬಂದು ನಿಂತಂತೆ ಅವನಿಗೆ ಭಾಸವಾಯಿತು. ಈ ಕಾರಣದಿಂದ ಫ್ಲಾಬೇರ ನಿಗೆ ಇವನೆಂದರೆ ಹೆಚ್ಚಿನ ಆದರಉಂಟಾಯಿತು. ಅವನನ್ನು ಮುಂದೆತರಲು ಸಾಕಷ್ಟು ಶ್ರಮವಹಿಸಬೇಕೆಂದು ನಿರ್ಧರಿಸಿದ.

ಎರಡುಸಲ ಶಾಲೆಗೆ ಹೋಗಿ ಬೇಸರಪಟ್ಟುಕೊಂಡು ಮನೆಗೆ ಹಿಂತಿರು ಗಿದ ಗಾಯ್‌ನನ್ನು ತಾಯಿಯಾದ ಲಾರಾ ಹೆಚ್ಚು ಒತ್ತಾಯ ಪಡಿಸಲಿಲ್ಲ. ಅವನಲ್ಲಿ ಆವೇಳೆಗೆ ಮನೆಮಾಡಿಕೊಂಡಿದ್ದ ಕಲಾಭಿರುಚಿ, ಗ್ರಂಥಗಳ ಅಭ್ಯಾ ಸದಲ್ಲಿರುವ ಆಸಕ್ತಿ, ಸಣ್ಣಸಣ್ಣ ಕವನಗಳನ್ನು ಬರೆಯುವ ಚಟ, ತಮ್ಮೂರಿಗೆ ಬರುತ್ತಲಿದ್ದ ಸಾಹಿತಿಗಳ ಪರಿಚಯ ಮಾಡಿಕೊಳ್ಳಲು ತೋರಿದ ಆಶೆ, ನಿಸ ರ್ಗದ ಸೊಬಗನ್ನು ಕಂಡಾಗಲೆಲ್ಲ ಹಿಗ್ಗುವ ಇವನ ಕುತೂಹಲ ದೋಣಿಯನ್ನು ಸಾಗಿಸುವುದರಲ್ಲಿ, ಮತ್ತು ವ್ಯಾಯಾಮಗಳಲ್ಲಿರುವ ಹುಮ್ಮಸ, ಇವುಗಳೆಲ್ಲ ವನ್ನೂ ಕಂಡು ತಾಯಿ ಲಾರಾ, ಗಾಯ್‌ನು ಯಾರ ಹಂಗಿನಲ್ಲಿರತಕ್ಕವನಲ್ಲ

ನೆಂಬ ನಿರ್ಧಾರಕ್ಕೆ ಬಂದಿದ್ದಳು. ಅವನಿಗೆ ಯಾವ ಬಗೆಯ ಎಡೆತಡೆಗಳನ್ನುಂಟು ಮಾಡುತ್ತಿರಲಿಲ್ಲ. ನಿಸರ್ಗದ ಸೊಬಗಿನಲ್ಲಿ ಬೆರತು, ವೈ ಮರೆತು ಗಂಟೆಗಳವರೆಗೆ ಬಯಲಿನಲ್ಲಿ ಇರಬೇಕೆಂದು ಬಯಸುವ ಇವನ ಆಕಾಂಕ್ಷೆಗೆ, ರಾತ್ರಿ ಹಗಲೂ ನದಿಯ ಮೇಲೆ ದೋಣಿಯಲ್ಲಿ ಸಮಯವೆಲ್ಲವನ್ನೂ ಕಳೆಯಲು ಬಯಸುವ ಇವನ ಮನೋನಿಶ್ಚಯಕ್ಕೆ ಎದುರು ಹೇಳದೆ ಪ್ರೋತ್ಸಾಹವನ್ನಿತ್ತಳು. ಇವನಿಗೆ ಪ್ರಿಯವಾದ ಎತ್ರೇ ನಗರದ ವರ್ಣನೆ, ಹಾರ್ವೇ ಬಂದರದ ಸೊಗಸು, ರೋವೆನ್ ನಗರದ ಸನ್ನಿವೇಶಗಳು, ಇವನ ಅನೇಕ ಕತೆಗಳಿಗೆ ಸಾಕಷ್ಟು ವಿಷಯ, ಮತ್ತು ವಸ್ತುಗಳನ್ನು ಒದಗಿಸಿರುವುದೆಂಬುದು ಇವನ ನೂರಾರು ಕತೆಗಳೇ ಹೇಳುತ್ತವೆ.

ಮುಂದೆ ಇವನು ರೋವೆನ್ ನಗರದ ಪ್ರೌಢ ಶಾಲೆಯಲ್ಲಿ ವಿದ್ಯಾಭ್ಯಾಸವನ್ನು ಮುಂದುವರಿಸಿದ; ಆ ನಗರದಲ್ಲಿದ್ದಾಗ ಅವನಿಗೆ ಕವಿ ಸ್ವಿನ್‌ಬರ್ನರ (Swinburne) ಮತ್ತು ಇತರ ಸಾಹಿತಿಗಳ ಪರಿಚಯವಾಯಿತು. ಸ್ವಿನ್‌ಬರ್ನರಿಗೆ ಗಾಯ್‌ನು ಅತ್ಯಂತ ಪ್ರೀತಿಯ ಮಿತ್ರನಾದ. ನದಿಯ ಸೆಳೆವಿನಲ್ಲಿ ಸಿಕ್ಕುಬಿದ್ದು ಮುಳುಗುತ್ತಿರುವ ಕವಿ ಸ್ವಿನ್‌ಬರ್ನರನ್ನು ಪ್ರಾಣಾಪಾಯ ವಿಪತ್ತಿನಿಂದ ತಪ್ಪಿಸಿದವನು ಗಾಯ್‌ನೇ. ಈ ಉಪಕಾರದ ಪರಿಣಾಮವಾಗಿ ಇವರಿಬ್ಬರಲ್ಲಿ ಸ್ನೇಹ ಮಮತೆಗಳು ನೆಲೆಗೊಂಡವು. ಗಾಯ್‌ನ ಕಾವ್ಯ ಸ್ಫೂರ್ತಿಗೆ ಈ ಸಾಹಿತಿ ಕಾರಣವಾದುದು ಸತ್ಯವೇ ಸರಿ. ಕವಿ ಲೂಯಿ ಬೂಲೇನನ್ನು ಕಂಡು ಆವನ ಉತ್ತಮ ಕವನಗಳ ಪರಿಚಯ ಮಾಡಿಕೊಂಡು ತನ್ನಲ್ಲಿಯ ಕಾವ್ಯದಾಹಕ್ಕೆ ಶಾಂತಿಯನ್ನೊದಗಿಸಿಕೊಂಡ.

ಕವಿ ಲೂಯೀ ಬೂಲೇನ ಪರಿಚಯ, ಮತ್ತು ಅನಂತರ ಇವರಿಬ್ಬರಲ್ಲಿ ಬೆಳೆದ ಗಾಢವಾದ ಮೈತ್ರಿಗೆ ಫ್ಲಾಬೇರನೇ ಕಾರಣನು. ದಿನವೂ ಫ್ಲಾಬೇರನು ಲೂಯೀ ಮನೆಯಲ್ಲಿ ಸಂಜೆ ಸಮಯ ಸಾಹಿತ್ಯ ಚರ್ಚೆ ನಡೆಸುವಾಗ ಗಾಯ್‌ನು ಬಹಳ ಉತ್ಸುಕತೆಯಿಂದ ಪ್ರೇಕ್ಷಕನಾಗಿ ಆನಂದವನ್ನು ಹೊಂದುತ್ತಿದ್ದ. ಇಂತಹ ಸನ್ನಿವೇಶಗಳನ್ನು ಕಲ್ಪಿಸಿಕೊಟ್ಟು ಬಾಲಕನಾದ ಗಾಯ್‌ನಲ್ಲಿ ಕಾವ್ಯ ಗಂಗೆಯ ಝರಿ ಹರಿಯಲು ಕಾರಣರಾದುದು ಈ ಸಾಹಿತಿಗಳೇ; ರೋವನ್ ನಗರವು ಗಾಯ್‌ನಿಗೆ ಅತ್ಯಂತ ಪ್ರೀತಿಯ ಊರಾಗಿತ್ತು.

ಚಿಕ್ಕವನಾಗಿದ್ದಾಗಲೇ ಇವನಿಗೆ ಕವನಗಳೆಂದರೆ ಬಲು ಪ್ರೀತಿಯೆಂದು ಮೇಲೆ ಹೇಳಲಾಗಿದೆ. ಇಂತಹ ಸಂಸ್ಕಾರವಂತರ ಸಹವಾಸದಲ್ಲಿದ್ದ ಗಾಯ್‌ನು ತನ್ನ ಮುಂದಿನ ವಿದ್ಯಾಭ್ಯಾಸವನ್ನು ಭರದಿಂದ ರೋವೆನ್ ನಗರದಲ್ಲಿಯೇ ಸಾಗಿಸಿದ. ೧೮೬೯ರಲ್ಲಿ ಅವನು ಪದವೀಧರನಾದಾಗ ತಾಯಿಯ ಸಂತೋಷ ಹೇಳತೀರದು. ಈ ಸಂತೋಷದ ಸಮಯಕ್ಕೆ ಸರಿಯಾಗಿ ಸಾಹಿತ್ಯ ಜೀವನಕ್ಕೆ ಕಾರಣನಾದ ಲೂಯೀ ಬೂಲೇ ಮರಣ ಹೊಂದಲು ಗಾಯ್‌ನಿಗೆ ಬಲು ಬೇಸರವೆನಿಸಿತು. ತನ್ನ ಸಾಹಿತ್ಯಗುರುವಿನ ಬಗ್ಗೆ ಚರಮ ಗೀತೆಯನ್ನು ಬರೆದು ಮೃತನಾದವನ ಆತ್ಮಕ್ಕೆ ಶಾಂತಿ ದೊರೆಯಲೆಂದು ಬಯಸಿದ. ಲೂಯೀ ಬೂಲೇಯವರು "ಮಗು ಸುಮ್ಮನೇ ಕವಿತೆಯನ್ನು ಬರೆದರೆ ಪ್ರಯೋಜನವಿಲ್ಲ. ಬರೆಯಬೇಕೆಂಬ ಹಂಬಲದ ಜೊತೆಗೆ ಸಂಸ್ಕಾರಬೇಕು. ಕಾವ್ಯೋಪಾಸಕರ ಸತತ ಸಹವಾಸ ಬೇಕು. ಮೇಲೆ ಜ್ಞಾನಭಾಂಡಾರವನ್ನು ಹೆಚ್ಚಿಸಿ ಕೊಳ್ಳುವ ಮನಸ್ಸು ಬರಹಗಾರನಲ್ಲಿರಬೇಕು. ಒಳ್ಳೆಯದೆಲ್ಲವನ್ನೂ ಓದಿ, ಹಿರಿಯರ ಹಾದಿಯನ್ನು ತುಳಿದು ನಿಷ್ಠೆಯಿಂದ ಮುಂದರಿಯುವಾಗ ಕ್ರಮೇಣ ನಿರ್ಮಿತವಾಗುತ್ತಿರುವ ಹೊಸ ಜಗತ್ತಿನ ಪ್ರಗತಿಗೆ ಅನುಗುಣವಾದ ಹೊಸ ಕಾವ್ಯ-ಸಾಹಿತ್ಯವನ್ನು ನಿರ್ಮಿಸುವ ಶಕ್ತಿ ತಾನಾಗಿಯೇ ಬರುವುದು. ಈ ಬಗೆಯಾಗಿ ಸಾಧಕನಂತೆ ಪ್ರಯತ್ನಿಸು. ನಿನ್ನಲ್ಲಿ ಶಕ್ತಿ ಇದೆ; ಕಾವ್ಯದಾಹವೂ ಇದೆ; ಮೇಲೆ ಮಾರ್ಗದರ್ಶಕರಾಗಿ ನಾನು, ಮತ್ತು ಫ್ಲಾಬೇರರೂ ಇರುವೆವು. ನಿಷ್ಠೆಯಿಂದ, ಧೈರ್ಯದಿಂದ ಮುಂದರಿದರೆ ನಿನಗೆ ಗೆಲುವು ನಿಶ್ಚಯ" ಎಂದು ಹೇಳಿದ ಮಾತುಗಳನ್ನು ಗಾಯ್‌ನು ಸದಾ ಮನನ ಮಾಡಿಕೊಂಡು ಮುಂದರಿದ.

ಲೂಯೀಯ ಮರಣದಿಂದ ಗೂಸ್ತವ್ ಫ್ಲಾಬೇರನು ನಿರುತ್ಸಾಹಿಯಾದ. ಮುಂದೆ ಐದಾರು ತಿಂಗಳಗಳಲ್ಲಿ ಇವನು ಪ್ಯಾರಿಸಕ್ಕೆ ವಕೀಲೀವಿದ್ಯೆ ಕಲಿಯಲು ಹೋದ. ಆದರೆ ಫ್ರಾಂಕೋ–ರಷಿಯನ್‌ರ ಕಾಳಗ ಆರಂಭವಾದುದರಿಂದ ತಂದೆಯ ಒತ್ತಾಯದ ಮೇರೆಗೆ ಸೈನಿಕನಾಗಿ ಸೇರಬೇಕಾಯಿತು. ಸೇನೆಯಲ್ಲಿ ಕೆಲಸಮಾಡುತ್ತಿದ್ದಾಗ ಅವನಿಗೆ ಯಾವ ರೀತಿಯ ಉತ್ಸಾಹವೂ ಇರುತ್ತಿರಲಿಲ್ಲ. ಅಲ್ಲಿಯ ನಿಯಮಿತ ಜೀವನ ಅವನಿಗೆ ಬೇಸರವನ್ನುಂಟು

ಮಾಡಿತು. ಕಾಳಗವು ೧೮೭೧ರಲ್ಲಿ ಕೊನೆಗೊಂಡಿತು. ಈ ಸಮಯದಲ್ಲಿ ತನ್ನ ಕಣ್ಣಿಗೆಬಿದ್ದ, ತಾನು ಕೇಳಿ ಗಟ್ಟಿಮಾಡಿಕೊಂಡ ಅನೇಕ ಯುದ್ಧ ಪ್ರಕರಣದ ಸನ್ನಿವೇಶಗಳನ್ನು ತನ್ನ ಕತೆಗಳಿಗೆ ಉಪಯೋಗಿಸಿಕೊಂಡ.

ಯುದ್ಧ ಮುಗಿದನಂತರ ಮತ್ತೆ ತನ್ನ ವಕೀಲೀ ಓದನ್ನು ಮುಂದರಿಸ ಬೇಕೆನ್ನುವುದರೊಳಗೆ ಕೆಲವೊಂದು ಮನೆತನದ ಅಡಚಣಿಗಳಮೂಲಕ ಅವನ ತಂದೆಯ ಒತ್ತಾಯದ ಮೇರೆಗೆ ಸರಕಾರದ ನೌಕಾ ಖಾತೆಯಲ್ಲಿ (Naval Ministry) ಕೆಲಸಕ್ಕೆ ಸೇರಲೇಬೇಕಾಗಿ ಅವನು ಪ್ಯಾರಿಸಕ್ಕೆ ಬರಬೇಕಾಯಿತು. ಐವತ್ತು ವಯಸ್ಸಿನ ಗಾಯ್‌ನ ತಂದೆಯು ಸಹ ಆಗ ಓರ್ಸ ದಲ್ಲಾಳಿಯ ಕಛೇರಿಯಲ್ಲಿ ಪಾಲುಗಾರನಾಗಿದ್ದುದರಿಂದ ಮಗನನ್ನು ಈ ಕೆಲಸಕ್ಕೆ ನೇಮಿಸಲು ಕಾರಣನಾದ. ಇವನು ದೂರದಿಂದಲೇ ತನ್ನ ಹೆಂಡತಿಮಕ್ಕಳಿಗೆ ಸಹಾಯವನ್ನು ಮಾಡುತ್ತಿದ್ದನೇ ಹೊರತು, ಅವರ ಆದರ, ಪ್ರೇಮಗಳನ್ನು ಎಂದೋ ಕಳೆದುಕೊಂಡಿದ್ದರಿಂದ ಅವರನ್ನು ಕಾಣಲು ಸಹ ಅಂಜುತ್ತಿದ್ದ.

ಗಾಯ್‌ನಿಗೆ ಮೊದಲು ಸರಕಾರದಲ್ಲಿ ಸಂಬಳವಿಲ್ಲದ ಕೆಲಸ ದೊರೆಯಿತು. ಆದರೆ ೧೮೭೨ರ ಅಕ್ಟೋಬರದಲ್ಲಿ ಸಂಬಳವು ಆರಂಭವಾಗಿ ಮುಂದೆ ೧೮೭೩ ಫೆಬ್ರುವರಿಯಲ್ಲಿ ಕೆಲಸ ಖಾಯಂ ಆಯಿತು. (ವರುಷಕ್ಕೆ ೧೬೫೦ ಫ್ರಾಂಕುಗಳು)

ಎತ್ರೇದ ವಿಶಾಲ ನಿರ್ಮಲ ಹವೆಯಲ್ಲಿ ಆನಂದದಲ್ಲಿ ಕಾಲಕಳೆದು, ರೋವೆನ್‌ದ, ಕ್ರೊಸಿಯೋದ ಕಾವ್ಯಮಯ ಜಗತ್ತಿನಲ್ಲಿ ವಿಹರಿಸಿ, ನಿಸರ್ಗದ ಸೊಬಗನ್ನು ಸವಿದು ವೈಮರಿತ ಗಾಯ್‌ನು ಈ ಸ್ವಲ್ಪೇ ಸಂಬಳದಿಂದ ಪ್ಯಾರಿಸದಲ್ಲಿ ಜೀವಿಸಬೇಕಾಯಿತು. ಆಗ ಅವನಿರುತ್ತಿದ್ದ ಕಿರು ಓಣಿಯಲ್ಲಿಯ ವಾಸ ಬಲು ಬೇಸರವೆನಿಸಿತು. ಇದರ ಜತೆಗೆ ಪ್ಯಾರಿಸದಲ್ಲಿರುತ್ತಿದ್ದ ತಂದೆಯ ಚುಚ್ಚು ಮಾತುಗಳು, ಟೀಕೆಗಳು ಇವನಿಗೆ ಹೇಳಲಾರದ ನೋವನ್ನುಂಟು ಮಾಡಿ, ಅವನ ಬಗ್ಗೆ ಪ್ರೇಮಾದರಗಳು ಸಂಪೂರ್ಣವಾಗಿ ಅಳಿದು ಹೋದವು.

ಗಾಯ್‌ನಿಗೆ ಪ್ಯಾರಿಸದಲ್ಲಿ ಗುಮಾಸ್ತನ ಕೆಲಸ ರುಚಿಸದಿದ್ದರೂ, ಸಾಹಿತ್ಯ ಗುರುವಾದ ಫ್ಲಾಬೇರನ ಸ್ನೇಹ ಬೆಳೆಯಲು ಕಾರಣವಾಯಿತು. ಇವರ ಮನೆಯಲ್ಲಿ ಆದಿತ್ಯವಾರ ಸೇರುತ್ತಲಿದ್ದ ಸಾಹಿತ್ಯ ಸಭೆಗೆ ಬರುತ್ತಲಿದ್ದ ಆ ಕಾಲದ ಸಾಹಿತಿಗಳ, ಪ್ರಕಾಶಕರ, ಮತ್ತು ಇತರ ಕಲಾವಿದರ ಪರಿಚಯುವಾಯಿತು. ಅನೇಕ ಸಲ ಗಾಯ್‌ನು ಎಲ್ಲರಗಿಂತಲೂ ಬೇಗ ಬಂದು ತಾನು ಬರೆಯಬೇಕೆಂಬ ಕತೆ, ಕವನಗಳ ರೂಪರೇಷೆಗಳನ್ನು ಫ್ಲಾಬೇರನಿಗೆ ಹೇಳಿ, ಚರ್ಚೆಮಾಡಿ, ತನ್ನ ಕಲೆಯಲ್ಲಿ ನಿಷ್ಣಾತನಾದನು.

ಈ ಸಭೆಗಳಿಗೆ ಬರುತ್ತಿದ್ದ ಪ್ರಸಿದ್ಧ ಫ್ರೆಂಚ ಕಾದಂಬರಿಕಾರ ಎಮಿಲ್ ಝೂಲಾನ ಪರಿಚಯುವಾಯಿತು. ಗಾಯ್‌ನು ಇತರ ತರುಣ ಬರಹಗಾರರ ಪರಿಚಯ ಝೂಲಾನ ಹಿರಿತನದಲ್ಲಿ ಐವರು ತರುಣ ಬರಹಗಾರರ "ಸಾರೆ-ದ-ಮೆದಾನ್" (Sores-de-medan) ಎಂಬ ಕಥಾ ಸಂಕಲನ ಹೊರಬಂತು. ಇದರಲ್ಲಿ ಪ್ರಕಟವಾದ (Boule-de-suif) "ಬೆಣ್ಣೆಯ ಮುದ್ದೆ" ಎಂಬ ಗಾಯ್‌ನ ಕತೆ ಪ್ರಪಂಚದ ಅತ್ಯುತ್ತಮ ಕತೆಗಳಲ್ಲೊಂದೆಂದು ಹೆಸರು ಪಡೆದಿದೆ. ಈ ಕತೆಯನ್ನು ಫ್ಲಾಬೇರನು ಓದಿ ಬಹಳ ಸಂತೋಷಗೊಂಡು ಗಾಯ್‌ನಿಗೆ ಉಜ್ವಲವಾದ ಭವಿಷ್ಯವಿದೆಯೆಂದು ಪ್ರೋತ್ಸಾಹಿಸಿದನಂತೆ.

ಮುಂದೆ ಗಾಯ್‌ನಿಗೆ ಗುರು ಫ್ಲಾಬೇರನ ನೆರವಿನಿಂದ ಸರಕಾರದ ಶಿಕ್ಷಣ ಮಂತ್ರಿಮಂಡಲದ ಕಛೇರಿಯಲ್ಲಿ ಕೆಲಸದೊರೆಯಿತು. ಈ ಕೆಲಸ ಬಲು ಹಗುರಾದುದು. ಗಾಯ್‌ನಿಗೆ ಬೇಕಾದ ವಿಶ್ರಾಂತಿ, ಮನಶ್ಯಾಂತಿ, ಮುಂತಾದವುಗಳು ದೊರೆತಿದುದರಿಂದ ಮುಂದೆ ಗಾಯ್‌ನಿಂದ ಹೆಚ್ಚು ಪ್ರಮಾಣದಲ್ಲಿ ಸಾಹಿತ್ಯ ನಿರ್ಮಿಸಲು ಶಕ್ಯವಿತ್ತು. ಇಂತಹ ಮಾರ್ಗದರ್ಶಕನಾದ ಗುರು ಫ್ಲಾಬೇರನು ೧೮೮೦ ರಲ್ಲಿ ಮರಣ ಹೊಂದಲು ಗಾಯ್‌ನಿಗೆ ಅತೀವ ದುಃಖವಾಯಿತು.

ಗುರುವಿನ ಮರಣದನಂತರ ಹತ್ತು ವರ್ಷದಲ್ಲಿ ಗಾಯ್‌ನಿಂದ ವಿಪುಲವಾದ ಸಾಹಿತ್ಯ ನಿರ್ಮಾಣವಾಯಿತು. ಅತ್ತ ಹೆತ್ತ ತಾಯಿಯ ಸತತ

ಖಾಯಿಲೆ, ಇತ್ತ ತನ್ನ ಸ್ವಂತ ದೇಹಸ್ಥಿತಿ ಕೆಡುವಿಕೆ, ಮತ್ತೊಂದತ್ತ ತಮ್ಮ್ರನಾದ ಹಾರ್ವೇನ ನಿರುದ್ಯೋಗದ ವ್ಯರ್ಥ ಜೀವನ ಇವನನ್ನು ಹಣಗಳಿಸುವ ಯೋಜನೆಯಲ್ಲಿ ಕೆಡವಿತು. ಶಕ್ತಿಮೀರಿ ದುಡಿದು ಬರಹದ ಮೂಲಕ ಹಣಗಳಿಸಲೇಬೇಕೆಂಬ ನಿರ್ಧಾರದಿಂದ ಸರಕಾರದ ಕೆಲಸಕ್ಕೆ ರಾಜೀನಾಮೆಯನ್ನಿತ್ತ. ೧೮೯೨ರವರೆಗೆ ಹತ್ತಾರು ಕಾದಂಬರಿಗಳನ್ನು, ೨೩೨ ಕತೆಗಳನ್ನೂ ಅನೇಕ ಪ್ರವಾಸ ಲೇಖನಗಳನ್ನೂ, ಉತ್ತಮ ಪ್ರಬಂಧಗಳನ್ನೂ ಬರೆದು ಮುಗಿಸಿದ.

ಇವನ ಕೃತಿಗಳಿಗೆ ಪ್ರಕಾಶಕರು ಹೇರಳವಾದ ಹಣವನ್ನು ಕೊಡುತ್ತಿದ್ದರು. ಶ್ರೀಮಂತರಿರುವ ವಿಸ್ತಾರಗಳಲ್ಲಿ ಮನೆ ಹಿಡಿದು ವಿಶ್ವಾಸಪಾತ್ರನಾದ ಫ್ರಾಂಕೋನೆಂಬವನನ್ನು ತನ್ನ ನಂಬುಗೆಯ ಆಳುಮನುಷ್ಯನನ್ನಾಗಿ ನೇಮಿಸಿಕೊಂಡ. ಪ್ಯಾರಿಸದ ವಿಲಾಸವರ್ಗದಲ್ಲಿ, ಶ್ರೀಮಂತರಲ್ಲಿ, ಸಾಹಿತ್ಯ ವರ್ಗಗಳಲ್ಲಿ, ಇವನ ಹೆಸರು ಪ್ರಸಾರವಾಯಿತು. ಇವನ ಕತೆಗಳು ಪತ್ರಿಕೆಗಳ ಮೂಲಕ ಬೆಳಕು ಕಂಡವು. ಇವುಗಳು ಬಹುಜನ ಪ್ರಿಯವಾಗಲು ಪ್ರಕಾಶಕರು ಗಾಯ್‌ನು ಕೇಳಿದಷ್ಟು ಹಣಕೊಟ್ಟು ಪುಸ್ತಕರೂಪದಲ್ಲಿ ಪ್ರಕಟಿಸಿದರು.

ಇವನ ಸಾಹಿತ್ಯ ಸಂಪತ್ತು ಬೆಳೆಯತೊಡಗಿದಂತೆಲ್ಲ ಇವನ ಆರೋಗ್ಯವು ಕೆಡತೊಡಗಿತು. ಉತ್ತಮ ಹವೆ ಮತ್ತು ವಿಶ್ರಾಂತಿಗಾಗಿ ದೂರ ದೇಶಗಳ ಪ್ರವಾಸವನ್ನು ಕೈಕೊಂಡ. ಅಲ್ಲಿಯ ಅನುಭವಗಳನ್ನು ತನ್ನ ಅನೇಕ ಕತೆಗಳಿಗೆ ಉಪಯೋಗಿಸಿಕೊಂಡ. ಜನರಿಗೆ ಉತ್ತಮ ಕತೆಗಳನ್ನು ನೀಡಿದ. ಏನು ಮಾಡಿದರೂ ಇವನ ಆರೋಗ್ಯವು ಸುಧಾರಿಸಲಿಲ್ಲ.

ಅನೇಕ ಮಾನಸಿಕ ತೊಂದರೆಗಳಿಗೆ ಈಡಾದ ಇವನ ಜೀವನ ಬಲು ಹಣ್ಣಾಯಿತು. ವಿಚಿತ್ರ ರೀತಿಯ ತಲೆನೋವು ಇವನಲ್ಲಿ ಕಾಣಿಸಿಕೊಂಡಿತು. ಇದು ಕ್ಷೀಣಹೊಂದಿದ ನರಗಳ ಬೇನೆಯೆಂದು ಡಾಕ್ಟರುಗಳು ಚಿಕಿತ್ಸೆ ನಡೆಸಿದರು. ನಿರ್ಬಂಧದ ಜೀವನ, ಶಾಂತಮಯ ಹವೆ, ವಿಶ್ರಾಂತಿ, ವಿಲಾಸಮಯ ಜೀವನದಿಂದ ದೂರ ಇರುವಿಕೆ ಮುಂತಾದವುಗಳು, ಇವನ ಬೇನೆ ಗುಣಹೊಂದುವುದಕ್ಕೆ ತೀರ ಅವಶ್ಯವೆಂದು ಡಾಕ್ಟರುಗಳು ಹೇಳಿದರು.

ಆದರೆ ಇವರ ಸಲಹೆಯಂತೆ ನಡೆದುಕೊಳ್ಳಲು ಗಾಯ್‌ನಿಗೆ ಶಕ್ಯವೇ ಆಗಲಿಲ್ಲ. ಇವನ ಬೇನೆ ಹೆಚ್ಚುತೊಡಗಿತು. ಅನೇಕ ರಾತ್ರಿಗಳನ್ನು ನಿದ್ರಾಹಾರಾದಿಗಳಿಲ್ಲದೆ ಕಳೆಯಬೇಕಾಯಿತು. ಇದರ ಜತೆಗೆ ತಮ್ಮನು ಹುಚ್ಚು ಹಿಡಿದು ಕೆಲವರ್ಷಗಳನಂತರ ಮರಣಿಸಿದುದು ಇವನ ಮನೋದೌರ್ಬಲ್ಯವು ಇನ್ನಿಷ್ಟು ಹೆಚ್ಚಲು ಕಾರಣವಾಯಿತು. ಇಷ್ಟಾದರೂ ಗಾಯ್‌ನು ಬರೆಯುವುದನ್ನು ಮಾತ್ರ ನಿಲ್ಲಿಸುತ್ತಿರಲಿಲ್ಲ. ವಾರದಲ್ಲಿ ಒಂದೆರಡು ಹೊಸ ಕತೆಗಳನ್ನು ಬರೆಯುತ್ತಲಿದ್ದ. ಅನೇಕ ಕತೆಗಳನ್ನು ನಾಟಕ ಪ್ರದರ್ಶನಕ್ಕೆ ಪರಿವರ್ತಿಸಿ ಕೊಟ್ಟ. ಇವನ ಕತೆಗಳು ಈ ಹೊತ್ತಿಗೆ ಅನ್ಯ ಭಾಷೆಗಳಲ್ಲಿ ಅನುವಾದಿಸಲ್ಪಟ್ಟವು. ಈ ಎಲ್ಲ ಕಾರಣಗಳಿಂದ ಇವನಿಗೆ ಹೇರಳವಾದ ಹಣ ದೊರೆತರೂ, ಮಾನಸಿಕ ಯೋಚನೆ ತಪ್ಪಲಿಲ್ಲ.

೧೮೯೨ ರ ಹೊಸದಿನದಲ್ಲಿ ಸೈಸ್‌ದಲ್ಲಿದ್ದ ತಂದೆ-ತಾಯಿಗಳನ್ನು ಕಂಡು ಕೇನ್ಸಕ್ಕೆ ಬಂದ. ಅಂದು ರಾತ್ರಿ ಅವನಿಗೆ ಹುಚ್ಚು ಹಿಡಿಯಿತು. ಆನಂತರ ಅವನಿಗೆ ಪಾರ್ಶ್ವವಾಯುವು ತಲೆದೋರಿ ೧೮೯೩ ರ ವರೆಗೆ ಅರೆಎಚ್ಚರದಿಂದಲೇ ಯಾತನೆಯನ್ನು ಅನುಭವಿಸಿ, ೬-೭-೧೮೯೩ ರಂದು ಮರಣ ಹೊಂದಿದ. ಒಂಭತ್ತನೇ ದಿನಾಂಕ ನಡೆದ ಶವ ಸಂಸ್ಕಾರಕ್ಕೆ ಸಾಹಿತ್ಯ ಮಿತ್ರರನೇಕರು ಬಂದಿದ್ದರು.

ಇವನ ಸಾವಿಗೆ ಫ್ರೆಂಚರ ನಾಡು ಮರುಗಿತು. ವಿಶ್ವವೇ ಅಂಜಲಿಯನ್ನರ್ಪಿಸಿತು. ಒಂದೆರಡು ತಿಂಗಳುಗಳವರೆಗೆ ಪತ್ರಿಕೆಗಳಲ್ಲಿ ಲೇಖನಗಳು ಪ್ರಕಟವಾದವು. ಇವುಗಳಲ್ಲಿ ಗಾಯ್‌ನ ಮಿತ್ರನಾದ ಝೋಲಾನ ಲೇಖನವು ಅತ್ಯುತ್ತಮವಾಗಿದೆ. ಅವನು ಜೀವಂತ ಇದ್ದಾಗ ಪ್ರತ್ಯಕ್ಷ ಪ್ರಸಾರ ಪ್ರಶಂಸೆ, ಆತ್ಮಸ್ತುತಿಗಳಿಂದ ದೂರಿರಲು ಯತ್ನಿಸಿದ. ಆದರೆ ಫ್ರೆಂಚ ಜನಾಂಗ ಅವನನ್ನು ಸಾವಿನನಂತರ ಉಚ್ಚ ರೀತಿಯಿಲ್ಲಿ ಗೌರವಿಸಿತು. ಈ ಮಹಾ ಸಾಹಿತಿಯ ಸಾವಿನಿಂದ ಫ್ರೆಂಚ ಕಥಾ ಸಾಹಿತ್ಯದ ಪ್ರಗತಿಗೆ ಅಪಾರವಾದ ಹಾನಿಯಾದುದು ವಿಶ್ವ ಕಥಾ ಸಾಹಿತ್ಯಕ್ಕೆ ತುಂಬಲಾರದ ತೆರವಾಗಿದೆಯೆಂದರೆ ತಪ್ಪಾಗಲಾರದು.

---

S. S. HIREMATH
Retd. Principal

# ಮೋಪಾಸಾನ ಓಲೆಗಳು

***

## ಸಾಹಿತ್ಯ ಗುರು ಫ್ಲಾಬೇರನಿಗೆ ಬರೆದ ಓಲೆಗಳು

— ೧ —

[ ಗಾಯ್-ದ-ಮೋಪಾಸಾನು ಪದವೀಧರನಾದ ಮೇಲೆ ಪ್ಯಾರಿಸದಲ್ಲಿ ಮಂತ್ರಿಗಳ ಕಚೇರಿಯಲ್ಲಿ ಕೆಲಸಕ್ಕಿದ್ದ ತಮ್ಮ ಮನೆತನದ ಪರಮ ಮಿತ್ರನೂ, ಸಾಹಿತ್ಯ ಗುರುವಾದ, ಫ್ಲಾಬೇರನ ನೆರವಿನಿಂದ ಸಾಹಿತ್ಯದಲ್ಲಿ ಕಾಲಿಡತೊಡಗಿದ; ೧೮೬೯ ರಿಂದ ೧೮೭೨ ರ ವರೆಗೆ ಆತನ ಮಿತ್ರರೆಲ್ಲರೂ ಒಬ್ಬೊಬ್ಬರಾಗಿ ಮರೆಯಾಗಲು ಫ್ಲಾಬೇರನು ಬಹಳ ನಿರುತ್ಸಾಹ ಹೊಂದಿದಾಗ, ಸಾಹಿತ್ಯ ಶಕ್ತಿಯುಳ್ಳವನೂ, ಬಹಳ ಜಾಣನೂ ಆದ ಗಾಯ್-ದ-ಮೋಪಾಸಾನನು ಇವನ ಹತ್ತಿರ ಬರತೊಡಗಿದ ಇವರಿಬ್ಬರಲ್ಲಿ ಗಾಢವಾದ ಪ್ರೇಮ, ವಿಶ್ವಾಸಗಳು ಬೆಳೆದವು. ಆ ಸಮಯದಲ್ಲಿ ಗಾಯ್‌ನು ಬರೆದ ಪತ್ರವಿದು. ]

**ಪ್ರಿಯ ಗುರುವೆ,**

ಈಗ ನನಗೆ ಸಂಬಳವಿಲ್ಲದ ಕೆಲಸ. ನಾನಿನ್ನೂ ಹೊಸಬನಾದುದರಿಂದ ಸಂಬಳವಿಲ್ಲದೆ ಕೆಲವು ತಿಂಗಳುಗಳು ಹಾಗೆಯೇ ಕೆಲಸ ಮಾಡಬೇಕೆಂದು ನೇಮಕವಾಗಿತ್ತು. ನನ್ನ ಆಶೆ ಆಕಾಂಕ್ಷೆಗಳು ಮಹತ್ವದ್ದಾಗಿದ್ದವು. ಇಂತಹ ಹಿರಿಯ ಸಾಹಿತಿಗಳ ನಡುವೆ ಇರುವ ನನ್ನ ಭವಿಷ್ಯ ಉಜ್ವಲವಾಗುವದೆಂದು ನನ್ನ ಬಯಕೆ ಇತ್ತು. ಪ್ಯಾರಿಸದಲ್ಲಿಯ ಆಫೀಸಿಗಿಂತಲೂ ನನಗೆ ಅರ್ಜನೇ ಹಳ್ಳಿಯ ನದಿಯ ವಾತಾವರಣವೇ ಬಹಳ ಆಕರ್ಷಣೀಯವಾಗಿತ್ತು. ಹತ್ತು ವರುಷಗಳ ಜೀವನದ ಹುರುಪು ನನಗೆ ಈ ಸೇನನದಿಯ ವಾತಾವರಣವೇ ಕಾರಣ. ಈ ನದಿಯ ನೀರು ಕೊಳಕಾಗಿದ್ದರೂ ಇದರ ಹೊಳಪು ನನ್ನನ್ನು ಮುಗ್ಧನನ್ನಾಗಿಸಿದೆ. ಇದು ನನ್ನ ಜೀವನಕ್ಕೆ ಹೊಸ ಚೇತನ, ಹೊಸ ಹೊಳಪನ್ನು ತಂದೊದಗಿಸಿದೆ. ನನ್ನ ಜೀವನದ ಕರ್ತವ್ಯವನ್ನು ಚೇತರಿಸಿತು.

ಈ ನದಿಯ ದಂಡೆಯ ಮೇಲಿನ ಸುಂದರವಾದ ಹುಲ್ಲಿನ ಬೆಳೆ, ಇವರ ನಡುವೆ ಸದ್ದು ಮಾಡುವ ಆ ಕಪ್ಪೆಗಳ ಕರಾಳ ಸ್ವರ, ನೀರ ಬಳ್ಳಿಗಳಲ್ಲಿ ಚೆಲುವಾಗಿ ಕಾಣುವ ನಾನಾಬಗೆಯ ಹೂವುಗಳು, ನನಗೆ ಎಲ್ಲಿಯೂ ಇಲ್ಲದ ಆನಂದ ವನ್ನುಂಟು ಮಾಡಿವೆ. ಈ ನಿಸರ್ಗ ದೇವತೆಯ ಸೊಬಗಿನಲ್ಲಿ ನಾನು ಅನೇಕ ಸಲ ಮೈಮರೆತು ಗಂಟೆಗಂಟೆಗಳ ವರೆಗೆ ಕೂತು ಕಾಲಕಳೆದುದುಂಟು.

ಒಂದೊಂದು ಸಲ ಸಮಸ್ತ ರಾತ್ರಿಯನ್ನು ಅಲ್ಲಿಯೇ ಕಳೆಯುತ್ತಿದ್ದೆ. ಆ ನದಿಯ ದಂಡೆಗಳ ಮೇಲಿನ ವನಗಳಲ್ಲಿ ಬೆಳಗಿನ ಸೂರ್ಯ ಅದೇ ತಾನೆ ಉದಯಿಸುವಾಗ, ಮುಂಜಾವಿನ ಮಬ್ಬಿನಲ್ಲಿ ತಿಳಿ ಹವೆಯು ಆವಿಯಲ್ಲಿ. ಮೆಲ್ಲಮೆಲ್ಲನೆ ಸೂರ್ಯನು ಉದಯಿಸುತ್ತಿರಲು, ಕಳ್ಳನಂತೆ ಚಂದ್ರನು, ಇಣಿಕಿಣಿಕಿ ಮರೆಯಾಗುವ ತಾರೆಗಳು ಮಾಯವಾಗುವ ಆ ಸುಂದರ ದೃಶ್ಯ ನನಗೆ ಹೆಚ್ಚಿನ ಆನಂದದಾಯಕವಾಗಿತ್ತು. ಇದನ್ನು ಅನೇಕರು ಪ್ಯಾರಿಸದ ಕೊಳೆಯನ್ನು ಅಡಗಿಸಿಕೊಂಡಿರುವ ಕೆಟ್ಟ ನದಿಯೆಂದು ಜನರು ಆಡಿಕೊಂಡರೂ, ನನಗೇಕೋ ಅನೇಕ ವೇಳೆಗಳಲ್ಲಿ ಉತ್ಸಾಹವನ್ನು, ಚೈತನ್ಯವನ್ನು ಒದಗಿಸಿದೆ.

**—ನಿಮ್ಮವನೇ, ಗಾಯ್**

– ೨ –

[ ಪ್ರತಿ ಆದಿತ್ಯವಾರವೂ ಈ ಗುರು ಶಿಷ್ಯರೂ ಮನೆಯಲ್ಲಿ ಸೇರುವದು ರೂಢಿ. ಆದರೆ ಫ್ಲಾಬೇರನು ಒಂದು ಆದಿತ್ಯವಾರ ಕ್ರೋಸೆದಲ್ಲಿರುವಾಗ ಗಾಯ್‌ನು ಬರೆದ ಪತ್ರ ಇದು. ]

**ಗುರುವೇ,**

ಪ್ರತಿ ಆದಿತ್ಯವಾರವೂ ನಿಮ್ಮ ಕೋಣೆಯಲ್ಲಿ ಕೂತು ಇತರ ಮಿತ್ರರೊಂದಿಗೆ ಚರ್ಚೆ ನಡೆಸುವುದು ನನಗೆ ದಿನದ ನಿತ್ಯದ ಸಂತೋಷದ ಕಾರ್ಯಕ್ರಮವಾಗಿದೆ. ಇಂದು ನೀವು ಕ್ರೋಸಿಯೋದಲ್ಲಿ ದೂರ ಇರುವಿರಿ. ನನಗೆ ನಿಮ್ಮಿಂದ ದೂರಿರುವುದೊಂದು ದುಃಖದ ಪ್ರಸಂಗವೇ ಸರಿ. ನಿಮ್ಮ ಆದಿತ್ಯವಾರದ ಸಾಹಿತ್ಯ ಚರ್ಚೆಗಳು ನನ್ನ ಜೀವನಕ್ಕೆ ಹೊಸ ಚೇತನವನ್ನು ನೀಡಿವೆ.

ನಿಮ್ಮೊಂದಿಗೆ ಮಾತನಾಡದಿದ್ದರೆ ನನಗೇಕೋ ಹುಚ್ಚು ಹಿಡಿದಂತೆನಿಸುತ್ತದೆ. ನಿಮ್ಮೊಂದಿಗೆ ಈ ಪತ್ರದ ಮೂಲಕವೇ ಮಾತನಾಡುತ್ತಿದ್ದೇನೆ ಕ್ಷಮಿಸಿ. ನನ್ನ ಈ ದಾಹಕ್ಕೆ ನೀವು ಎರೆಯುತ್ತಿದ್ದ ಒಳ್ಳೇ ನೀರಿನಿಂದ ಈ ಬಳ್ಳಿ ಚಿಗುರಿ ಹೂಗಳನ್ನು ಬಿಡತೊಡಗಿದೆ.

ನಿಮ್ಮನ್ನು ಹೆಚ್ಚು ತೊಂದರೆಗೊಳಿಸುವುದಿಲ್ಲ. ನನ್ನ ಮನೆತನಕ್ಕೆ ನೀವು ಇಲ್ಲಿಯ ವರೆಗೆ ಮಾಡಿದ ನೆರವನ್ನೆಂತು ಮರೆಯಲಿ, ತಂದೆ? ಹೆತ್ತತಂದೆಯಿಂದ ದೂರಾದ ನನಗೆ ನೀವು ದೇವದತ್ತ ತಂದೆಯಂತೆ ಬಂದು ನೆರವಾಗುತ್ತಿರುವಿರಿ. ಇದು ನನ್ನ ಸುದೈವ.

ಒಂದು ಮಾತು ನಿಮ್ಮ ಮುಂದೆ ಹೇಳಬಯಸುತ್ತೇನೆ. ಬೇರೇ ಭಾವಿಸಬೇಡಿ. ನಿಮ್ಮ ಮುಂದೆ ಕುಳಿತು ಮಾತನಾಡುತ್ತಿರುವಾಗ ನಮ್ಮಿಂದ ಮರೆಯಾಗಿರುವ ಸೋದರ ಮಾವ ಆಲ್‌ಫ್ರೇಡರೇ ನನ್ನ ಮುಂದೆ ಕುಳಿತು ಮಾತನಾಡುತ್ತಿರುವಂತೆನಿಸುತ್ತದೆ. ಅವರನ್ನು ನಾನು ಕಂಡರಿಯೆ. ಆದರೆ ಅವರ ವಿಷಯ ನನ್ನ ತಾಯಿಯು ಹೇಳಿದುದು ಚನ್ನಾಗಿ ನೆನಪಿದೆ. ಈ ಬಗೆಯ ಆತ್ಮೀಯತೆ ನಮ್ಮಿಬ್ಬರ ನಡುವೆ ಉಂಟಾಗಲು ನೀವು ನನ್ನನ್ನು ಕಾಣುವ ಆ ಮಮತೆಯ ಕಣ್ಣೇ ಕಾರಣವೆಂದು ಈ ಅಣುಗ ಹೇಳುತ್ತಿರುವನು. ಕವಿ ಮಿತ್ರ ಲೂಯೀ ಭೂವೇಯುವರ ನೆನಪು ಇಂದಾಗುತ್ತಿದೆ. ಈ ಉರ್ವರು ಇಂದು ಜೀವಿಸಿದ್ದರೆ ನನ್ನ ಅಭ್ಯುದಯವನ್ನು ಕಂಡು ಹಿಗ್ಗುತ್ತಿದ್ದರಲ್ಲವೇ?

ನಿಮ್ಮ ಆಶೀರ್ವಾದವಿರಲಿ ಗುರುವೆ. ನೀವು ಮಾರುತ್ತರವನ್ನು ಬರೆಯುವ ಗೋಜಿಗೆ ಹೋಗಬೇಡಿ.

**—ನಿಮ್ಮ ಸೇವಕ, ಗಾಯ್**

— ೩ —

[ ಎಮಿಲ್ ಝೋಲಾನ ಬಗ್ಗೆ ಫ್ಲಾಬೇರನಿಗೆ ಗಾಯ್-ದ-ಮೋಪಾಸಾನನು ಒಂದು ಪತ್ರದಲ್ಲಿ ಸೂಚಿಸಿದ ಅಭಿಪ್ರಾಯಗಳಿವು. ಝೋಲಾನ ಅಹಂಭಾವ, ಸ್ವಯಂ ಪ್ರತಿಷ್ಠೆ, ಸುಲಭರೀತಿಯಲ್ಲಿ ಕೀರ್ತಿಗಳಿಸುವ ಹಂಬಲ, ಮುಂತಾದವುಗಳು ನಿಜಸಾಹಿತಿಯ ಒಳ್ಳೇ ಲಕ್ಷಣಗಳು ಅಲ್ಲವೆಂದು ಇವನ ಅಭಿಪ್ರಾಯವು. ]

ಪ್ರಿಯ ಗುರುವೇ,

ಝೋಲಾನ ವಿಷಯ ತಮ್ಮ ಅಭಿಪ್ರಾಯವೇನು? ಅವರೇಕೋ ಕೊಂಚ ಸ್ವಪ್ರತಿಷ್ಠೆಯ ಕಡೆ ಹೆಚ್ಚು ಲಕ್ಷ್ಯಕೊಡುವಂತೆ ಕಂಡುಬರುತ್ತಿದೆ. ಇತ್ತೀಚೆಗೆ ಅವರು ವಿಕ್ಟರ್‌ಹ್ಯೂಗೊರ ಬಗ್ಗೆ ಬರೆದ ಲೇಖನಗಳನ್ನು ಓದಿರುವೆನು. ಅಲ್ಲದೆ ಪ್ರಜಾಪಕ್ಷವಾದದ ಪತ್ರಿಕೆಯ "ಪ್ರಜಾರಾಜ್ಯದಲ್ಲಿರಬೇಕಾದ ಸಾಹಿತ್ಯ ಎಂಬ ಶಿರೋನಾಮದಲ್ಲಿ ಬರೆದ ಲೇಖನದಲ್ಲಿ "ಪ್ರಜಾರಾಜ್ಯದಲ್ಲಿರಬೇಕಾದುದು ನಿಸರ್ಗವಾದವನ್ನು ಅನುಸರಿಸಿದ ಸಾಹಿತ್ಯವು. ಆದರ ನೆರವಿಲ್ಲದ ಪ್ರಜಾರಾಜ್ಯವು ಬಹಳ ಕಾಲ ಬಾಳಲಾರದು" ಎಂದು ಬರೆಯುತ್ತಿ: ನಾನ್ರೋರ್ವ 'ಸಾಹಿತ್ಯ ಸೇವಕ' ಎಂದು ತನ್ನ ವಿನಯವನ್ನು ತೋರಿಸುವನು. ಉದ್ಧಟತನದ ಹತ್ತಿರವೇ ವಿನಯ ಸೂಚಕ ವಾಕ್ಯ! ಇದರ ನಿಜಾರ್ಥ ವೇನೋ ನನಗಂತೂ ತಿಳಿಯದಾಗಿದೆ. ಇದು ಸರಿಬೀಳದು ಗುರುವೇ. ಆದರೂ ಇವರ ಸೆಳೆತದಲ್ಲಿರುವೆನು. ಇದರ ನಿಜಾರ್ಥ ನಿಮಗೊಬ್ಬರಿಗಲ್ಲದೆ ಅನ್ಯರಿಗೆ ಇದು ತಿಳಿಯಲಾರದು. ಅವನನ್ನು ಸಾಹಿತಿಯೆಂದು ಪೂಜಿಸುವೆನು. ಆದರೆ ಅವರಲ್ಲಿ ತುಂಬಿರುವ ಅಹಂಭಾವ, ಸ್ವಯಂ ಪ್ರತಿಷ್ಠೆ, ಸುಲಭ ರೀತಿಯಲ್ಲಿ ಕೀರ್ತಿಗಳಿಸುವ ಹಂಬಲ, ಇವುಗಳೇಕೋ ನನಗೆ ಸರಿಬೀಳುವುದಿಲ್ಲ. ಇವರಲ್ಲಿ ನಾನು ಕುಶಲನಾಗಿರುವುದು ಅವರಿಗೆ ಸೇರುವಂತೆ ಕಾಣುವುದಿಲ್ಲ. ನನ್ನ ನಾಟಕಗಳಲ್ಲಿ ತೋರುವ ಯಥಾರ್ಥವಾದದ ತತ್ವ ಇವರಲ್ಲಿ ಯಾರಿಗೂ ಸೇರುವುದಿಲ್ಲವೆಂಬುದು ನನ್ನ ಪ್ರತ್ಯಕ್ಷ ಅನುಭವದ ಮಾತಾಗಿದೆ. ಅವರಿಂದ ನನ್ನ ಕೆಲಸವಾಗಬೇಕಾಗಿದೆ. ಆದುದರಿಂದಲೇ ಅವರನ್ನು ಅನುಸರಿಸುತ್ತಿರುವೆನು. ಬೇರೇ ಭಾವಿಸಬೇಡಿ. ಝೋಲಾರೂ ಹೀಗೆ ಅಸೂಯೆ ಪಡುವರೆಂದು ನಾನು ಎಂದೂ ಎಣಿಸಲಿಲ್ಲ. ಈ ಬಿಚ್ಚುಮಾತಿಗೆ ಕ್ಷಮಿಸಿ.

ನಿಮ್ಮ ಅಣುಗ, ಗಾಯ್

— ೪ —

[ ೧೮೭೧ರ ಮೇ ತಿಂಗಳಲ್ಲಿ ಫ್ಲಾಬೇರನು ಗಾಯ್-ದ-ಮೋಪಾಸಾನಿಗೊಂದು ಪತ್ರ ಬರೆದು ಅದರಲ್ಲಿ ರೋವೆನ ನಗರ ಬಗ್ಗೆ ಬರೆಯುತ್ತಿರುವ ನೀಳ್ಗತೆಯನ್ನು ಹೊಗಳುತ್ತ

ಆವನ್ನೂ ಸ್ವಾಗತಿಸುತ್ತ, ಅವನನ್ನು ಕವನಗಳನ್ನು ಎಡೆಬಿಡದೆ ಬರೆಯಬೇಕೆಂತಲೂ, ನಾಟಕಗಳನ್ನು ಹಿಂದಿನಂತೆಯೇ ಬರೆವರೆ ಆವನ ಕೀರ್ತಿಯು ಹೆಚ್ಚುವುದಲ್ಲದೆ ಆದರಿಂದ ಹೆಚ್ಚಿನ ಆರ್ಥಿಕ ಲಾಭವಿದೆಯೆಂದು ಎಚ್ಚರಿಸಿದನು. ಅದರಲ್ಲಿ "ಮಗುವೇ, ನೀನು ಕಳಿಸಿದ ನೀಳ್ಗತೆಯ ರೂಪರೇಷೆಯನ್ನು ಮಾತ್ರ ಸೂಚಿಸಿರುವೆ; ಬಹಳ ಚೆನ್ನಾಗಿದೆ. ಈ ಕತೆಯಿಂದ ನಿನ್ನ ಖ್ಯಾತಿ ಹೆಚ್ಚುವುದು. ನಿನ್ನ ಆ ಐವರು ಮಿತ್ರರು ಅಸೂಯೆಪಡುವರು. ಹಾಗೆಂದು ನೀನು ಸುಮ್ಮನಿರುವುದಕ್ಕಾಗುವುದೆ? ನೋಡಬೇಕು ನಿನ್ನ ಆ ಕೃತಿ ಹೇಗಾಗುವುದೋ? ಬೇಗ ಬರೆದು ಮುಗಿಸು" ಎಂದು ಸೂಚಿಸಿದ್ದ. "ಬೆಣ್ಣೆಮುದ್ದೆ" ಎಂಬುವೇ ಇಲ್ಲಿ ಸೂಚಿಸಿರುವ ಕತೆ.

[ ಮೋಪಾಸಾನು ಇದಕ್ಕೆ ಮಾರುತ್ತರವಾಗಿ ಬರೆದ ದೀರ್ಘ ಪತ್ರ ಇದು ]

**ಪೂಜ್ಯರೇ,**

ಆ ಸಂಕಲನದಲ್ಲಿ ನನ್ನದೊಂದೇ ಕತೆಯಲ್ಲ; ಇತರರೂ ಅದರಲ್ಲಿ ಬರೆಯುವರು. ಅದರ ವಿವರ ಇದು; ಝೊಲಾರು ಒಂದು ಪತ್ರಿಕೆಯಲ್ಲಿ ಯುದ್ಧದ ಹಿನ್ನೆಲೆಯುಳ್ಳ ಕತೆಯೊಂದನ್ನು ಪ್ರಕಟಿಸಿರುವರು. ಮತ್ತೊಂದು ಹುಸ್ಮೇಮನ್ನರೂ ಬರೆದು ಪ್ರಕಟಿಸಿರುವರು. ಇನನು "ರಕ್ತಪಾತ" ಎಂಬ ಮತ್ತು ರೋಮಾಂಚಕಾರಕವಾದ ಕತೆ-ಪ್ಯಾರಿಸದ ಮುತ್ತಿಗೆಯನ್ನು ಕುರಿತು-ಬರೆದು ರಷಿಯಾದ ಪತ್ರಿಕೆಗೆ ಕಳಿಸಿರುವನು. ನನ್ನ ಕತೆಯಿಂದ ಸಂಕಲನವು ಬಹಳ ಹೆಸರು ಗಳಿಸುವುದೆಂದು ನನ್ನನ್ನು ಪ್ರೋತ್ಸಾಹಿಸುತ್ತಿರುವರು. ಆದುದರಿಂದ ಉಳಿದ ನಾವು ಮೂರ್ವರೂ ಇದೇ ರೀತಿಯ ಕತೆಗಳನ್ನು ಬರೆಯಬೇಕೆಂದು ಒತ್ತಾಯಪಡಿಸುತ್ತಿರುವರು. ಕೊನೆಯ ಪಕ್ಷ ನಮಗೆ ಒಂದು ನೂರು ಫ್ರಾಂಕುಗಳಾದರೂ ಹಣ ದೊರೆಯುವುದೆಂದು ಭರವಸೆಯನ್ನಿತ್ತಿರುವರು. ನಾವು ನಮ್ಮ ಕತೆಗಳನ್ನು ಬರೆದು ಮುಗಿಸಿರುವೆವು. ನನ್ನ ಕತೆಯ ವಿವರ ನಿಮಗೆ ಆಗಲೇ ತಿಳಿಸಿರುವೆನು. ಇನ್ನೇನು, ಎರಡು ತಿಂಗಳಲ್ಲಿ ಆ ಈ ಸಂಕಲನವನ್ನು ಹೊರತರುವೆನೆಂದು ಕಾರ್ಪೆಂತಿಯನ್ನರು ಆಶ್ವಾಸನವನ್ನಿತ್ತಿರುವರು.

ಗುರುವೆ, ಈ ಸಂಕಲನವನ್ನು ಹೊರಡಿಸುವುದರಲ್ಲಿ ನನಗೆ ಯಾವ ಬಗೆಯ ಕುಕಲ್ಪನೆಗಳಿಲ್ಲ. ರಾಜ್ಯ ವಿಧ್ವಂಸಕ ಭಾವನೆಗಳಿಲ್ಲ. ಈಗಿನ ರಾಜ್ಯಾಡಳಿತದೆದುರು ಬರೆಯುವ ಇಚ್ಛೆ ನನ್ನದಾಗಿಲ್ಲ. ಆದರೆ, ನಮ್ಮ ಗೆಳೆ

ಯರು ಈ ಯುದ್ಧದ ಬಗ್ಗೆ ತಳೆದ ವೈಯಕ್ತಿಕ ಭಾವನೆಗಳನ್ನು ತಮ್ಮ ಸ್ವಂತ ಮಾತಿನಲ್ಲಿ ಕತೆಯ ರೂಪದಲ್ಲಿ ಕಾಣಿಸಿರುವದು, ಒಂದು ಪಕ್ಷದ ಸಮರ್ಥನೆಯ ಪ್ರಚಾರ ಕೆಲಸವಲ್ಲ. ಇದರಲ್ಲಿ ಹಿಂದಿನ ಕಾಲದ ಯೋಧರ, ಕೇವಲ ಅಂಕೆಸಂಕೆಗಳ ಯುದ್ಧೋಪಕರಣಗಳ ಕುಶಲರಾಗಿ, ಉನ್ನತ ಕಾಲದ ಗರ್ವದ, ಸೊಕ್ಕಿನ ಶ್ರೀಮಂತ ವರ್ಗದವರಲ್ಲ. ನಮ್ಮ ಕತೆಗಳಲ್ಲಿ ಬರುವ ಮಿಲಿಟರಿ ನಾಯಕರು, ಇತರ ಉನ್ನತ ಅಧಿಕಾರಿಗಳು, ಕೇವಲ ಸಾಮಾನ್ಯ ವರ್ಗದಿಂದ ಆ ಪದವಿಗೇರಿದವರು. ಅವರ ಚಟುವಟಿಕೆಗಳಲ್ಲಿ ಕುಶಲತೆ ಇಲ್ಲ. ಮೂರ್ಖತನವೇ ನಮ್ಮೆದುರು ಬಂದು ನಿಲ್ಲುವುದು. ಹೀಗೆ ನಾವು ಸ್ವಲ್ಪ ಮಟ್ಟಿಗೆ ವಿನೋದ ಸನ್ನಿವೇಶಗಳನ್ನು, ಹಾಸ್ಯದ ಸಂದರ್ಭಗಳನ್ನು ಆಯ್ದು ಅವುಗಳನ್ನು ಕುಚೋದ್ಯದ ಮಾತಿನಲ್ಲಿ ಅಡಗಿಸಿರುವುದರಿಂದ ಓದುಗರಿಗೆ ಇದೊಂದು ಹೊಸ ಬಗೆಯ, ಸತ್ಯ ಜೀವನದ ಕಲ್ಪನೆಗಳಾಗಿ ನಿಲ್ಲುವವು. ನಾನು ಮೊದಲೇ ಸೂಚಿಸಿದಂತೆ ಇದರಲ್ಲಿ ಊಹೆ ಉತ್ಪ್ರೇಕ್ಷೆಗಳಿಲ್ಲ. ಜನರು, ನಕ್ಕು ನಲಿದು ಹಿಗ್ಗುವರು. ನನ್ನ ಉದ್ದೇಶದಲ್ಲಿ ಕಥೆಯ ಚಿತ್ರಣವು ಇನ್ನೂ ಹೆಚ್ಚು ವಾಸ್ತವಿಕವಾಗಿರಬೇಕು. ಜನರಿಗೆ ಸತ್ಯದ ನಿಜಕಲ್ಪನೆಯನ್ನು, ಜೀವನದ ಕಟುಸತ್ಯದ ಚಿತ್ರಗಳನ್ನು, ಇದ್ದ ಹಾಗೆ ಬಣ್ಣಿಸಿದರೆ ಅವರು ಸಿಟ್ಟಿಗೇಳುವುದು ಸಹಜ. ಇದು ಮಾನವಕುಲದ ಸಾಮಾನ್ಯ ಸ್ವಭಾವ. ಇಲ್ಲಿಗೆ ಪತ್ರ ಮುಗಿಸುವೆನು."

—ತಮ್ಮ ವಿಶ್ವಾಸದ, ಗಾಯ್

[ ಈ ಪತ್ರಕ್ಕೆ ಫ್ಲಾಬೇರನು ತಡಮಾಡದೆ ಬಹಲು ಬರೆದನಂತೆ. ಅದರಲ್ಲಿ ಸತ್ಯದ ಬರಹಗಾರರ ನಿಜನೀತಿಯನ್ನು ಚಿತ್ರಿಸಿ ಗಾಯ್‌ನು ಮೊದಲೇ ಸೂಚಿಸಿದ ಈ ಕಥಾ ಸಂಕಲನದ ಬಗ್ಗೆ "ನಿಜ, ನನಗೆ ನಿನ್ನ ಈ ಕಥಾಸಂಕಲನದ ವಿಷಯ ನೆನಪಾಯಿತು; ಗಾಯ್, ಪತ್ರ ಬರೆಯುವಾಗ ಅಂದು ಆ ಮಾತು ನನ್ನ ನೆನಪಿನಲ್ಲಿರಲಿಲ್ಲ. ಮರೆತು ಬಿಟ್ಟೆ. ಬೇರೆ ತಿಳಿಯಬೇಡ. ಅಹುದು, ನಿಮ್ಮ ಕಥಾ ಸಂಕಲನಕ್ಕೆ ಹೆಸರು ಏನೆಂದು ಇಡುವಿರಿ? ಇದೊಂದು ಸಮಸ್ಯೆಯಾಗಿಯೇ ಪರಿಣಮಿಸಬಹುದು. ಪುಸ್ತಕ ಹೊರಬಂದ ನಂತರ ನನಗೆ ಮತ್ತೆ ಪತ್ರ ಬರೆ. ಅದರ ಬಗ್ಗೆ ನಡೆದ ಚರ್ಚೆಯ ವಿವರವನ್ನೂ ತಿಳಿಸು. ಅದನ್ನು ತಿಳಿಯಲು ನನಗೆ ಮೋಜೆನಿಸುತ್ತದೆ. ಆದರಲ್ಲಿಯ ನಿನ್ನ ಆ ಕತೆ ಹೆಚ್ಚು ಹೆಸರು ಪಡೆಯುವುದು. ಈ ನನ್ನ ಅಭಿಪ್ರಾಯದಲ್ಲಿ ಸತ್ಯವಿದೆ. ನಿನ್ನ ನಿಜ

ನಾದ ಸತ್ವ ಅದರಲ್ಲಿ ಅಡಗಿದೆ. ನಿನ್ನ ಕಥಾರಚನಾಶಕ್ತಿ, ಪಾತ್ರ ಪೋಷಣೆ, ವಿಷಯಗಳ ಜೋಡಣೆ, ಬಲು ಚನ್ನಾಗಿದೆ. ನಿನಗೆ ಯಶಸ್ಸು ದೊರೆಯಲಿ."

—-ಫ್ಲಾಬೇರ್]

— ೫ —

[ ಮೋಪಾಸಾ ಪ್ಯಾರಿಸದಲ್ಲಿ ಕೆಲಸಕ್ಕೆ ನಿಂತ ಸಮಯದಲ್ಲಿ, ಆಗಿನ ರಾಜಕೀಯ ವಾತಾವರಣವು ಫ್ಲಾಬೇರನಿಗೆ ವಿದಿತವಾಗಿದ್ದರೂ, ತನ್ನ ಮನಸ್ಸಿಗೆ ಉಂಟಾದ ನೋವು ಸಂಕಟಗಳನ್ನು ತೋಡಿಕೊಂಡು ಸಂಕಟದಿಂದ ಪಾರಾಗಲು ಮಾರ್ಗವೇನೆಂದು ಈ ಪತ್ರದಲ್ಲಿ ಗುರುವಿನನ್ನು ಬೇಡುತ್ತಿರುವನು. ]

ಪ್ಯಾರಿಸ
೧೦—೧೨—೧೮೭೭

**ಮಮತೆಯ ಗುರುವೇ,**

ನಿಮಗೆ ಪತ್ರ ಬರೆಯಬೇಕೆಂದು ಬಹಳ ದಿನಗಳಿಂದ ಕಾದಿದ್ದೇನೆ. ಆದರೆ ರಾಜಕೀಯ ವಿಚಾರಗಳು ನನ್ನನ್ನು ತಡೆದು ನಿಲ್ಲಿಸಿವೆ. ರಾಜಕೀಯ ವಿಚಾರಗಳೆಂದೆನಲ್ಲ: ಇಲ್ಲಿಯ ವಾತಾವರಣದ ಹೇಸಿ ವಿಷಯಗಳಿಗೆ, ತವರೂರಾಗಿದೆ. ಇನ್ನೊಬ್ಬರ ಮುಖದಾಕ್ಷಿಣ್ಯಕ್ಕೆ ಬೆದರಿ ತಮ್ಮ ಹೃದಯದಲ್ಲಿ ಏರಿ ಬರುವ ವಿಚಾರಗಳನ್ನು ತಡೆದು ಹಿಡಿಯುವಂತಹ ಸನ್ನಿವೇಶಗಳಿಗೆ ನಾನು ರಾಜಕೀಯವೆಂದು ಕರೆಯುತ್ತೇನೆ. ಇಲ್ಲಿಯ ವಾತಾವರಣ ನನ್ನನ್ನು ಆಗಲೇ ಬೇಸರಗೊಳಿಸಿದೆ. ಹೊರಗೆ ಸ್ವಚ್ಛ ಹವೆಯಲ್ಲಿ ತಿರುಗಾಡುವುದಾಗಲಿ, ನದಿಯ ನೀರಿನ ಮೇಲೆ ನನ್ನ ಡೋಣಿಯಲ್ಲಿ ಕುಳಿತು ವಿಹರಿಸುವುದಾಗಲಿ ನನಗೆ ಕನಸಿನಮಾತಾಗಿ ಹೋಗಿದೆ. ಚಿಕ್ಕಂದಿನಿಂದಲೂ ನನ್ನ ಮನಸ್ಸಿಗೆ ಬಂದಂತೆ ವಿಹರಿಸಿ ಸುಖಪಡೆಯುವ ನನ್ನ ಜೀವನಕ್ಕೆ ಈ ಆತಂಕಗಳು ಬಹು ನೋವನ್ನುಂಟುಮಾಡಿವೆ. ಅದೇಕೋ ಇಲ್ಲಿ ನನಗೆ ಹೊಸ ಬಗೆಯ ಹುಮ್ಮಸ ಬಂದಂತಿದೆ. ಜೀವನದಲ್ಲಿ ಬೇಸರಗೊಂಡು, ಒಂದು ಬಗೆಯ ಜಿಗುಪ್ಸೆಯ ಸ್ವಭಾವದವನಾದ ನನಗೆ ಇಲ್ಲಿ ನೂತನವಾದ ಹುರುಪು ತಲೆದೋರುತ್ತಿದೆ. ಈ ಹುಮ್ಮಸವು ನನ್ನ ಶರೀರದಾದ್ಯಂತವೂ ವ್ಯಾಪಿಸಿ ನನ್ನನ್ನು ಹುಚ್ಚೆಬ್ಬಿಸಿದೆ. ಈ ಬಗೆಯ ಹೊಸ ಆವೇಗದ ಜ್ವರ ಇಡೀ ಪ್ಯಾರಿಸ್ ನಗರವನ್ನೇ ಆಕ್ರಮಿಸಿದಂತೆ ಕಾಣುತ್ತದೆ. ಆದರೆ ಈ ಹುರುಪು-ಹುಮ್ಮಸು ಕೇವಲ

ಮಾನಸಿಕವೇ ಹೊರತು ಕಾರ್ಯರೂಪದಲ್ಲಿ ಬಂದಿಲ್ಲ. ಈ ಮಾನಸಿಕ ರೋಗದಿಂದ ತುಂಬಿದ ಈ ಪ್ಯಾರಿಸ ನಗರದಲ್ಲಿ ಎಲ್ಲಿ ನೋಡಿದರೂ ಅಶಾಂತತೆ ನೆಲೆಗೊಂಡಿದೆ: ಜನರು ತೀವ್ರ ಕೋಪಿಗಳಾಗಿದ್ದಾರೆ. ನನ್ನ ಸ್ವಭಾವವೂ ಅದೇ ಬಗೆಯದಾಗಿದೆ. ಮಾತನಾಡಿಸಿದವರ ಮೇಲೆ ಸಿಟ್ಟಿಗೆದ್ದೇಳುವಂತಾಗುತ್ತದೆ. ಇಲ್ಲಿಯ ಜನರು ಮಿತ್ರರೆಂದು ಹತ್ತಿರ ಬಂದು ಹೊಗಳುವವನ್ನು ಕಂಡರೆ ನನ್ನೆದೆ ಉರಿಯುತ್ತಿದೆ. ನನ್ನಲ್ಲಿ ಸಹನೆಯು ಕುರುಹೇ ಇಲ್ಲವೆನ್ನಬಹುದು. ನಾನು ಶೀಘ್ರಕೋಪಿಯಾಗಿದ್ದೇನೆ. ಮಾನವರಲ್ಲಿ ಇರಬೇಕಾದ ಸಹನೆ ತಾಕ್ಕ್ರಿ ಮಾಯವಾದಂತಿದೆ. ಈಗಿನ ಸರಕಾರವನ್ನು ಎಷ್ಟು ತೆಗಳಿದರೂ ಕಡಿಮೆಯೇ ಸರಿ. ಯಾವನು ಹತ್ತೆಂಟು ಕಾಳಗಗಳಲ್ಲಿ ವಿಜಯಶಾಲಿಯಾಗಿ, ಉತ್ತಮ ಯೋಧನೆಂದು ಹೆಸರು ಗಳಿಸಿದನೋ, ಯಾವನ ಯುದ್ಧ ನೈಪುಣ್ಯ ಜಗತ್ತೆಲ್ಲವೂ ಹೊಗಳುತ್ತಿದೆಯೋ, ಅಂತಹ ಶೂರನ ಆಳಿಕೆಯು. ಮನೆಗಳಲ್ಲಿ ಕುಳಿತು ಕತೆ, ಕಾದಂಬರಿಗಳನ್ನು ಬರೆದು ಸಾಹಿತ್ಯಪ್ರಿಯರ ದಾಹವನ್ನು ತೀರಿಸಲು ಬರೆಯುತ್ತಿರುವ ಪಾಮರ ಬರಹಗಾರರ ಮೇಲೆ ಇವರ ಗದಾಪ್ರಹಾರವೇ? ದೇಶದ ಸಾಹಿತಿಗಳು, ನಾಡದ್ರೋಹಿಗಳೆಂದು ಪರಿಗಣಿಸಿ ಬರೆಯಬಾರದೆಂದು ಹೊರಡಿಸಿರುವ ಇವರ ಕಾನೂನಿಗೇನನ್ನಬೇಕು? ಇವರ ಈ ಕಾನೂನಿನಿಂದ ಎಷ್ಟು ಬಡಪಾಯಿಗಳಿಗೆ ದುಃಖವೊದಗಿದೆ? ಇವರ ಹಿಡಿತದಲ್ಲಿ ಸಿಕ್ಕು ಎಷ್ಟು ಮಂದಿ ಶಾಂತಿಪ್ರಿಯರು ಯಾತನೆಯನ್ನು ಅನುಭವಿಸುತ್ತಿರುವರು? ನಮ್ಮನ್ನು ಈ ಬಗೆಯಾಗಿ ಕಾಡುವದರಿಂದ ಇವರಿಗಾಗುವ ಲಾಭವೇನು?

ಪ್ರಸ್ತುತ ಸರಕಾರದವರ ಈ ವರ್ತನೆಯನ್ನು ಟೀಕಿಸುವಲ್ಲಿ ನಾನು ಕೊಂಚ ಅಕ್ರಮ ಮಾರ್ಗ ಹಿಡಿದಿರುವೆನೆಂದು ಬೇರೆ ಭಾವಿಸಬೇಡಿ. ನನ್ನ ಮನಸ್ಸಿನಲ್ಲಿಯ ಈ ಭಾವನೆಗಳನ್ನು ನಾನು ತಡೆಯುವುದಾದರೂ ಹೇಗೆ? ಸರಕಾರದ ಪಕ್ಷವಹಿಸಿ ಅವರು ಮಾಡಿದುದೆಲ್ಲವೂ ಸರಿಯೆಂದು, ಅವರ ಬಾಲವನ್ನೇ ಬಡಿಯುತ್ತ ಹಿಗ್ಗಿನಡೆಯುವ ಈ ದುರಹಂಕಾರಿಗಳನ್ನು–ಈ ಶ್ರೀಮಂತ ವರ್ಗದವರನ್ನು–ಕಂಡರೆ ನನಗೆ ಬಲುಕೋಪ. ಸಮಾಜದ ಹಿತಚಿಂತಕರೆಂದು ಹೊಗಳಿಸಿಕೊಳ್ಳುವ ಈ ನೀಚ ಸ್ವಾರ್ಥಿಗಳ ತಂಡವು ಎಂದು ಅಳಿಯುವದೋ, ಅಂದೇ ನಮ್ಮ ಬಾಳು ಹಸನಾಗುವದು.

ನಮ್ಮ ಸ್ವಾತಂತ್ರ್ಯವನ್ನು ತಡೆಯುವ ಈ ಆಡಂಬರ ಜೀವಿಗಳಿಗೇನನ್ನು ಬೇಕು? ೧೭೯೩ ರಲ್ಲಿ ನಡೆದ ವಿಧ್ವಂಸಕ ಚಳುವಳಿಯ ಹಿಂದೆ ಇದ್ದ (Marat) ಮಾರಾ, (Dante) ಡಾಂಟೆ (Robespiere) ರಾಬಸ್ಪೀರೇ ಮುಂತಾದ ನಾಯಕರು ವಿಪ್ಲವದ ಚಳುವಳಿಯನ್ನು ಸರಿಯಾಗಿ ಮುಂದರಿಸಲಿಲ್ಲವೆಂದು ನಾನಿಲ್ಲಿ ಸೂಚಿಸಬೇಕಾಗಿದೆ. ಈ ವೇಷಧಾರಿಗಳನ್ನು ನಾವು ನಿರ್ನಾಮಮಾಡದ ಹೊರತು ಮೋಕ್ಷವಿಲ್ಲ; ಬಿಡುಗಡೆಯು ಬಹು ದೂರವೇ ಸರಿ. ಸಮಾಜದಲ್ಲಿ ಈಗ ಬೇರೂರಿ ನಿಂತಿರುವ ಈ ದಬ್ಬಾಳಿಕೆಯ ವರ್ಗ ಪೂರ್ಣ ಅಳಿಯಬೇಕು; ಅಳಿಯಲೇಬೇಕು. ಇವರೆಲ್ಲರನ್ನೂ ಸತಿಸಮೇತರಾಗಿ ಉರಿಯುವ ಬೆಂಕಿಗೆ ಆಹುತಿಯಾಗಿಸಿದ ಹೊರತು ದೇಶಕ್ಕೆ ಕ್ಷೇಮವೆಂಬುದು ಕನಸಿನ ಮಾತೇ ಸರಿ. ತೀವ್ರಗಾಮಿಗಳೇ, ನೀವು ನಮ್ಮನ್ನು ಈ ಪದವಿ ಪ್ರೇಮಿಗಳಿಂದಲೂ, ದೇಶದ್ರೋಹಿಗಳಿಂದಲೂ, ನಮ್ಮೆಲ್ಲರಿಗೆ ಒದಗುವ ವಿಪತ್ತಿನಿಂದ ಪಾರಾಗುವಂತೆ ಸಹಕರಿಸಬೇಕೆಂದು ಬೇಡಿಕೊಳ್ಳುತ್ತೇನೆ. ಈ ನಿರಂಕುಶ ಪ್ರಭುಗಳ ದಬ್ಬಾಳಿಕೆಯಿಂದ ನಮ್ಮನ್ನು ಕಾಪಾಡಬೇಕೆಂದು ಕೇಳಿಕೊಳ್ಳುತ್ತೇನೆ.

ಈ ಬಗೆಯ ವಿಷವಾಯುವಿನಲ್ಲಿ ನನ್ನ ಯೋಚನಾಲಹರಿ ಮಂದವಾಗುತ್ತಿದೆ. ನನಗೆ ಒಂದಕ್ಷರ ಬರೆಯಲು ಸಹಾ ಆಗಿಲ್ಲ. ವಿಮೋಚನದ ದಿನಕ್ಕಾಗಿ ಬಹು ಆತುರದಿಂದ ಕಾದಿರುವೆನು. ಪತ್ರ ಬರೆಯುವಿರಾ?

ನಿಮ್ಮ ಶಿಷ್ಯ, —ಗಾಯ್

— ೬ —

[ ಮೋಪಾಸಾನು ಪ್ಯಾರಿಸದಲ್ಲಿ ಸರಕಾರದ ಕಛೇರಿಯಲ್ಲಿ ಕೆಲಸದಲ್ಲಿದ್ದಾಗ, ಅವನು ಅನೇಕ ಸಮಯ ತನ್ನ ಕೆಲಸದ ಬಗ್ಗೆ, ಸರಕಾರದ ಅನಾದರತೆಯ ಬಗ್ಗೆ, ಇತರ ಸಾಹಿತಿಗಳ ಬಗ್ಗೆ ಗುರುವಾದ ಫ್ಲಾಬೇರನಿಗೆ ಬರೆಯುತ್ತಲಿದ್ದ ಪತ್ರಗಳಲ್ಲಿ ಇದೊಂದು ಮಾದರಿಯದು ]

ಪ್ಯಾರಿಸ
೨೧—೮—೧೮೭೮

ಪ್ರೀತಿಯ ಗುರುವೇ,

ಈಗ ಬಹಳ ದಿನಗಳಿಂದ ನಿಮಗೆ ಪತ್ರಗಳನ್ನೇ ಬರೆದಿಲ್ಲ. ಕ್ಷಮಿಸಿ. ನಾಲ್ಕಾರು ವಾರಗಳಿಂದ ಏನಾದರೂ ಬರೆಯುವ ಎಂದು ಬಹಳವಾಗಿ ಯತ್ನಿಸಿದೆ. ಆದರೆ ಉಪಯುಕ್ತವಾದ ವಿಷಯದ ಒಂದು ಹಾಳೆಯನ್ನು ಸಹಾ ಬರೆಯಲು ನನಗೆ ಸಾಧ್ಯವಾಗಲಿಲ್ಲ. ನಿರುತ್ಸಾಹವು ನನ್ನನ್ನು ಆವರಿಸಿದೆ. ದಿನದಿನವೂ ನಿರಾಶೆಯಿಂದ ನಾನು ಕುಗ್ಗುತ್ತಿದ್ದೇನೆ. ಇದರಿಂದ ಪಾರಾಗುವ ಬಗೆ ಹೇಗೆಂಬುದು ಯೋಚನೆಯ ವಿಷಯವಾಗಿದೆ. ಕಛೇರಿಯಲ್ಲಿ ಏಳು ಗಂಟೆಗಳ ಸಮಯ ಕೆಲಸ ಮಾಡಿ ಮನೆಗೆ ಬಂದೆನೆಂದರೆ ದಣುವಿನಿಂದ ಮುಂದಾವ ಕೆಲಸ ಮಾಡುವ ಶಕ್ತಿ ನನ್ನಲ್ಲಿ ಉಳಿದಂತೆ ಎನಿಸುವುದಿಲ್ಲ. ನನ್ನ ಮನಸ್ಸು ಅದೊಂದು ಬಗೆಯ ಗೊಂದಲದಲ್ಲಿ ಸಿಕ್ಕಿ ಬಿದ್ದು ಸುಮ್ಮನೆ ಕುಳಿತುಕೊಳ್ಳುವಂತೆನಿಸುತ್ತದೆ. ಗಾಲೋಪತ್ರಿಕೆಗೆ ಏನಾದರೂ ಬರೆದು ಕೊಂಚ ಹಣವಾದರೂ ಗಳಿಸುವಯೆಂಬ ಪ್ರಯತ್ನ ನಿಷ್ಫಲವಾಗತೊಡಗಿದೆ. ಲೇಖನ ಬರೆಯಲು ಮನಸ್ಸೇ ಆಗುವಂತಿಲ್ಲ. ಆರಂಭಿಸಲು ವಾಕ್ಯಗಳೇ ಹೊರಹೊಮ್ಮುವುದಿಲ್ಲ. ಇದರ ಜತೆಗೆ ಇತರ ಮನೆಯ ವಿಷಯಗಳೂ ನನ್ನ ಮನಸ್ಸನ್ನು ಗೊಂದಲದಲ್ಲಿ ಬೀಳಿಸಿವೆ. ಎರಡು ತಿಂಗಳ ಹಿಂದೆ ವೈಪ್ಪಸ್ಥವಿಲ್ಲೆಂದು ಏತ್ರೇಕ್ಕೆ ಹೋದ ನನ್ನ ತಾಯಿಯ ಪ್ರಕೃತಿ ಚಿಂತಾಜನಕವಾಗಿದೆ. ಆಕೆಯನ್ನು ಎದೆ ಬೇನೆ ಬಹುವಾಗಿ ಹಣ್ಣು ಮಾಡಿದೆ. ಆಗಾಗ್ಗೆ ಆಕೆಗೆ ಮೂರ್ಛೆಯು ಸಹಾ ಬಂದು ಕಾಡುತ್ತಿರುವುದಂತೆ. ಪತ್ರಗಳನ್ನು ಬರೆಯಲು ಸಹಾ ಆಕೆಯಲ್ಲಿ ಶಕ್ತಿ ಉಳಿದಿಲ್ಲವೆಂದು ಕಂಡುಬರುತ್ತದೆ. ಆದರೆ ಆ ತಾಯಿ ತನ್ನ ದಾದಿಗೆ ಹೇಳಿ ಬರೆಸಿದ ಪತ್ರಗಳು ಹದಿನೈದು ದಿನಗಳಿಗೊಮ್ಮೆ ಬರುತ್ತಿರುವುದರಿಂದ ನಾನು ಅವರ ಸ್ಥಿತಿಗಳನ್ನು ತಿಳಿಯಲು ಶಕ್ತನಾಗಿದ್ದೇನೆ.

ಪ್ರಸಿದ್ಧ ಸಾಹಿತಿಯಾದ ಝೋಲಾನನ್ನು ಸರಕಾರವು ಸನ್ಮಾನಿಸುವುದಂತೆ. ನಾವೆಲ್ಲರೂ ನೆನೆದಂತೆ ಬಹಿರಂಗವಾಗಿ ಗೌರವಿಸಿಲ್ಲ. ಪತ್ರಿಕೆಗಳಲ್ಲಿ ಆತನನ್ನು ಸರಕಾರವು ಬಹುಮಾನಿಸುವುದೆಂದು ಪ್ರಕಟಿಸಿದ್ದಾರೆ. ಆ ಸುದಿನವೆಂದು ಬರುವುದೋ ಎಂದು ಅನೇಕ ಉತ್ಸಾಹಿ ಬರಹಗಾರರೂ, ಸಾಹಿತ್ಯ

ಪ್ರೇಮಿಗಳೂ ಆಶೆಯಿಂದ ಕಾದಿರುವರು. ಈ ವಿಷಯವನ್ನು ಸುಮ್ಮನೇ ಮುಂದೂಡುವುದು ಸರಿಯಲ್ಲವೆಂದು ನನಗೆನಿಸುತ್ತಿದೆ. ಅವರಲ್ಲಿ ಒಂದು ಆದಿತ್ಯವಾರ ಕಳೆಯುವೆನೆಂದು ಮಾತು ಕೊಟ್ಟಿದ್ದೇನೆ. ಬೇಗನೆ ಆ ಸಮಯ ಒದಗಬಹುದು. ಇದರ ಬಗ್ಗೆ ಅವರ ಅಭಿಪ್ರಾಯವೇನಿದೆಯೆಂಬುದನ್ನು ಅರಿಯಲು ಕಾತರನಾಗಿದ್ದೇನೆ. ಅವರೂ ಕೊಂಚ ನೊಂದುಕೊಂಡಿರಬೇಕು; ಕೊಂಚವೇಕೆ ಹೆಚ್ಚಾದ ನೋವು ಅವರಿಗೆ ಆಗಿರಲಿಕ್ಕೆ ಸಾಕು. ಇಂತಹ ಆಡಂಬರದ ಗೌರವ ಅವರೇನೂ ಆಶಿಸುವುದಿಲ್ಲ. ಆದರೆ ಸರಕಾರವು ಇಂತಹ ವಿಷಯಗಳಲ್ಲಿ ತೋರುತ್ತಿರುವ ಅನಾದರಣೆಯ ಬಗ್ಗೆ ಅವರಿಗೆ ನೋವಾಗಿರಬೇಕೆಂದು ನನ್ನ ಊಹೆ.

ಪೂಜ್ಯ ಟರ್ಗನೋವರನ್ನು ಅವರು ರಶಿಯಾಕ್ಕೆ ಹೊರಡುವ ಮುನ್ನ ಕಂಡು ಮಾತನಾಡಿದೆ. ಅವರು ಹೆಚ್ಚಿನ ಗೊಂದಲದಲ್ಲಿದ್ದರು; ಶಾಂತಚಿತ್ತರಾಗಿರಲಿಲ್ಲ. ಅವರ ಎದೆ ಬೇನೆಯ ಬಗ್ಗೆ ರಶಿಯಾದಲ್ಲಿ ಸರಿಯಾದ ಡಾಕ್ಟರರನ್ನು ಕಾಣುವವರೆಗೆ ಅವರಿಗೆ ಸಮಾಧಾನವಾಗುವಂತಿಲ್ಲ. ಅವರ ಎಡಗಡೆಯ ಎದೆಯು ಕೊಂಚ ಬಲಹೀನವಾಗಿದೆಯೆಂದು ಇಲ್ಲಿಯ ಡಾಕ್ಟರರು ಹೇಳಿರುವುದರಿಂದ ಗಾಬರಿಗೊಂಡಿದ್ದಾರೆ. ಇದೇನು? ನನ್ನೆಲ್ಲ ಮಿತ್ರರಿಗೂ ಈ ಬಗೆಯ ಎದೆ ಬೇನೆಯೇ ಬರಬೇಕೇ? ಈ ಕೆಟ್ಟ ಎದೆ ಬೇನೆ ಎಲ್ಲಿಂದ ಬಂದು ನಮ್ಮನ್ನು ಕಾಡುತ್ತಿದೆಯೋ ತಿಳಿಯೆ.

ಇನ್ನು ನನ್ನ ವಿಷಯ: ಬರೆಯಲು ನಾಚಿಕೆಯಾಗುತ್ತಿದೆ. ನನ್ನ ತಲೆಗೂದಲುಗಳು ಒಂದೊಂದಾಗಿ ಉದುರುತ್ತಿವೆ. ಇದು ಸಿಫ್ರಿಸ್ ಬೇನೆಯ ಪರಿಣಾಮವೆಂದು ವೈದ್ಯರು ಹೇಳುತ್ತಾರೆ. ಆದರೆ ಜನ್ಮದದಿನದಿಂದ ನನ್ನಲ್ಲಿ ಮನೆಮಾಡಿಕೊಂಡ ಸಂಧಿವಾತವು, ಎದೆ, ಮತ್ತು ಹೊಟ್ಟೆಗಳಿಗೆ ಸಾಕಷ್ಟು ತಾಪವನ್ನುಂಟುಮಾಡಿ, ಈಗ ಅದು ದೇಹದ ಚರ್ಮದ ವರೆಗೆ ವ್ಯಾಪಿಸಿದೆಯಂತೆ. ನನಗೆ ಸ್ಟೀಮ್‌ಬಾತ್‌ನ ಚಿಕಿತ್ಸೆ ನಡೆಸಿರುವರು. ಇದು ನಡೆಯುತ್ತ ಬಂದು ಬಹಳ ದಿನಗಳಾದರೂ ನನಗೆ ಈ ಚಿಕಿತ್ಸೆಯಿಂದ ಯಾವ ಬಗೆಯ ಗುಣವೂ ಕಂಡು ಬಂದಿಲ್ಲ. ಇದರ ಜತೆಗೆ ಡಾಕ್ಟರಗಳು ನೇಮಿಸುತ್ತಿರುವ ಔಷಧ ಉಪಚಾರಗಳ ಕ್ರಮವನ್ನು ಅನುಸರಿಸಿದುದರಿಂದ ಬೇಸಿಗೆಯ ದಿನ

ನಲ್ಲಿ ಸುಖ ಪ್ರವಾಸಕ್ಕೆಂದು ನಾನು ಕೊಡಿಟ್ಟ ಹಣವೆಲ್ಲವೂ ವೆಚ್ಚವಾಗಿ ಹೋಯಿತು. ನನ್ನ ಹಣ ತೀರಿಹೋದುದೊಂದೇ ಪರಿಣಾಮವೇ ಹೊರತು, ವೈದ್ಯರ ಈ ಚಿಕಿತ್ಸಾ ಕ್ರಮದಿಂದ ನನಗೆ ಯಾವ ಬಗೆಯ ಗುಣವೂ ಆಗಲಿಲ್ಲ. ಆಯಿತು, ಆ ಹಣದಿಂದ ಅವರಿಗಾದರೂ ಕೊಂಚ ಅನುಕೂಲವಾಗಿದ್ದರೆ ನನಗೂ ಸ್ವಲ್ಪ ಸಂತೋಷವೆನಿಸುತ್ತದೆ.

ನಿಮ್ಮ ಆಶ್ರಯವನ್ನು ಕೋರುವ, —ಗಾಯ್

— ೭ —

[ ಈ ಪತ್ರದಲ್ಲಿ ಫ್ಲಾಬೇರನು ಮೋಪಾಸಾನಿಗೆ ಸರ್ವವಿಧದಲ್ಲಿಯೂ ನೆರವಾಗು ತ್ತಿದ್ದನೆಂಬ ವಿಷಯ ತಿಳಿದು ಬರುತ್ತದೆ. ಇವನ ಎಲ್ಲ ಕೃತಿಗಳನ್ನು ಮೊದಲು ಓದಿ ಸಲಹೆ ಸೂಚನೆಗಳಿಂದ ಅವುಗಳನ್ನು ಉತ್ತಮಗೊಳಿಸಿ, ಉತ್ತಮ ಸಾಹಿತಿಯಾಗಲು ಹೇಗೆ ನೆರವಾದನೆಂಬ ಅಂಶವು ವಿಶದವಾಗುತ್ತದೆ. ]

**ಪೂಜ್ಯರೇ,** ಸಪ್ಟಂಬರ ೧೮೭೮

ನಿಮ್ಮ ಪತ್ರ, ಮತ್ತು ನನ್ನ ಕೃತಿಯನ್ನು ತಿದ್ದಿದ ಕರಡುಗಳೂ ಬಂದು ಸೇರಿದವು. ನಿಮ್ಮ ಸೂಚನೆಯಂತೆ ಎಲ್ಲವನ್ನೂ ನೆರವೇರಿಸಿದ್ದೇನೆ. ನಾಟಕದ ಮೊದಲನೆಯ ಐದು ಹಾಳೆಗಳನ್ನು ತೆಗೆದುಹಾಕಿದ್ದೇನೆ. ಮತ್ತೆ ನಾಟಕವೆಲ್ಲವನ್ನೂ ಪೂರ್ಣ ಬರೆದು ಮುಗಿಸಿದ್ದೇನೆ; ಮಿತ್ರನಾದ ಪೋಂಟೇ ಇವರಿಗೆ ಈ ತಿದ್ದಿದ ಪ್ರತಿಯನ್ನು ಓದಿದೆ. ಆ ಮಿತ್ರನು ಇದೊಂದು ಏಕಾಂಕನಾಟಕವಾಯಿತೇ ಆಗಲಿ, ದೊಡ್ಡ ನಾಟಕವಾಗಲಿಲ್ಲವೆಂತಲೂ, ನಾವು ತೆಗೆದು ಹಾಕಿದ ಅನೇಕ ವಿಭಾಗಗಳು ಜನರ ಒಪ್ಪಿಗೆ ಪಡೆದಿದ್ದವೆಂತಲೂ ಇದರಿಂದ ನಾಟಕದ ರೂಪು ಪೂರ್ತಿ ಬದಲಾಗಿದೆಯೆಂತಲೂ ತಮ್ಮ ಅಭಿಪ್ರಾಯ ವ್ಯಕ್ತ ಮಾಡಿದರು. ನಾಟಕದಲ್ಲಿ ಓಟವೇ ಕಡಿಮೆಯಾದಂತೆನಿಸಿದೆಯೆಂದು ಹೇಳಿದರು. ಆದರೆ ನಿಮ್ಮಿಷ್ಟದಂತೆ ತಿದ್ದಿದ ಆವೃತ್ತಿ ಬಹಳ ಉತ್ತಮವಾದ ಕೃತಿಯಾಗಿದೆಯೆಂದು ನನ್ನ ವೈಯಕ್ತಿಕ ಅಭಿಪ್ರಾಯ. ನಿಮ್ಮ ಅಭಿಪ್ರಾಯವೇನು? ನೀವು ಈ ಬಗ್ಗೆ ಏನನ್ನೂ ಬರೆದಿಲ್ಲ. ಈಗ ಈ ನಾಟಕವು ಬಹು ಸುಂದರವಾಗಿದೆ; ಬೇಕಾದ ಹೊಂದುಗೂಡಿಕೆ ಇದೆ. ಇದೊಂದು ಅತ್ಯು

ತ್ತಮ ನಾಟಕವಾಗಬಹುದೆಂದು ನನ್ನ ಎಣಿಕೆ. ಇದರಲ್ಲಿ ಆ ಶ್ರೀಮಂತನ ಸ್ವಗತ ಭಾಷಣ ಜನರಿಗೆ ಬೇಜಾರು ಉಂಟುಮಾಡಲಾರದು. ಮತ್ತೆ ಈ ನಾಟಕದ ಆಕಾರವನ್ನು ಕಡಿಮೆಮಾಡಿದರೆ ಅದು ಹೆಚ್ಚು ಸರಿಕಾಣಲಾರ ದೆಂದು ನನ್ನ ಅಭಿಮತ. ಆದುದರಿಂದ ಈ ನಾಟಕವನ್ನು ಯಾರಾದರೂ ರಂಗಭೂಮಿಯ ಮೇಲೆ ತಂದರೆಂದರೆ ಜನರ ಮೇಲೆ ಉತ್ತಮ ಪರಿಣಾಮ ವನ್ನುಂಟುಮಾಡಿ ನನಗೆ ಕೀರ್ತಿ ಖಂಡಿತವಾಗಿ ತರುವುದೆಂದು ನನ್ನ ಹೆಬ್ಬಯಕೆಯಾಗಿದೆ.

ಈ ತಿದ್ದಿದ ಆವೃತ್ತಿಯೊಂದಿಗೆ ನನ್ನ ಮತ್ತೊಂದು ಕೃತಿಯಾದ (Le Demando) ಡಿಮಾಂಡ ಎಂಬ ನಾಟಕವನ್ನು ನಿಮ್ಮ ಅವ ಲೋಕನೆಗಾಗಿಯೂ ಮತ್ತು ಸಲಹೆಗಾಗಿಯೂ ಕಳಿಸುತ್ತಿರುವೆನು. ತಾವು ಇವೆರಡನ್ನೂ ಓದಿ ತಮ್ಮ ಸಲಹೆ ಸೂಚನೆಗಳೊಂದಿಗೆ ಕಳುಹಬೇಕೆಂದು ಕೋರುತ್ತೇನೆ.

**ನಿಮ್ಮ ಮಮತೆಯ, ಗಾಯ್**

— ೮ —

[ ಫ್ಲಾಬೇರನಿಗೆ ಅನೇಕ ಶ್ರೀಮಂತರ ಮತ್ತು ಸರಕಾರದ ಮಂತ್ರಿಗಳ ಪರಿಚಯ ವಿತ್ತು. ನೌಕಾ ಕಚೇರಿಯ ಕೆಲಸದಲ್ಲಿ ಬೇಸರವನ್ನು ತೋರಿದ ತನ್ನ ಶಿಷ್ಯನಿಗೆ ವಿದ್ಯಾಖಾತೆಯಲ್ಲಿ ಕೆಲಸ ಕೊಡಿಸಲು ಯತ್ನಿಸಿದರು. ಅದರಂತೆ ಮುಂದೆ ಮೋಪಾ ಸಾಸಿಗೆ ಆ ಕೆಲಸವೂ ಸಿಕ್ಕಿತು, ಹೆಚ್ಚಿನ ಸಂಬಳದ ಮೇಲೆ. ಮೋಪಾಸಾ ತನ್ನ ಸ್ವಂತ ಅಭಿಪ್ರಾಯಗಳನ್ನು ಮತ್ತು ಮನೋಗತವನ್ನು ಮುಚ್ಚಿಡುವ ಸ್ವಭಾವ ಅಲ್ಲವೆಂದು ಈ ಪತ್ರದಿಂದ ನಾವು ತಿಳಿಯಬಹುದು. ]

ಪ್ಯಾರಿಸ್
೪–೧೧–೧೮೭೮

**ಪೂಜ್ಯ ಗುರುವೇ,**

ಇಂದು ಮುಂಜಾನೆ ಮಂತ್ರಿವರ್ಯ ಬೋರ್ಡೋ ಇವರ ಸೆಕ್ರೆಟರಿಯವ ರನ್ನು ಕಾಣಲು ಹೋಗಿದ್ದೆ; ಅವರನ್ನು ಕಾಣಬೇಕೆಂದು ಆಮಂತ್ರಣ ಬಂದಿ ತ್ತು. ತಾವು ಮಂತ್ರಿಗಳಿಗೊಂದು ಮಾತು ಸೂಚಿಸಿದ್ದರಂತೆ. ಅದರ

ಮೇರೆಗೆ ಮಂತ್ರಿಗಳು ತಮ್ಮ ಆತ್ಮೀಯ ಸೆಕ್ರೆಟರಿಯವರಿಗೆ ನನ್ನನ್ನು ಕಂಡು ನನಗೇನಾದರೂ, ಅವಶ್ಯವೆನಿಸಿದ ಸಹಾಯವನ್ನು ಮಾಡಬೇಕೆಂದು ಸೂಚಿಸಿರುವರಂತೆ. ನಿರ್ದಿಷ್ಟವಾದ ನೆರವು ಯಾವುದೆಂಬುವುದನ್ನು ಶ್ರೀ. ಶ್ರೀ. ಮಂತ್ರಿಗಳು ಹೇಳುವುದು ಮರೆತಿದ್ದರಾದುದರಿಂದ, ಅವರಿಗೂ ನೆನಪಿನಲ್ಲಿರಲಿಲ್ಲವೆಂದು ಕಾಣುತ್ತದೆ. ಸೆಕ್ರೆಟರಿಗಳು ನನ್ನನ್ನು ಕಾಣಲು ಬಯಸಿದರು.

ಅವರನ್ನು ಕಂಡು ನನ್ನ ವಿಷಯ ಪೂರ್ತಿ ಹೇಳಿದೆ. ಅವರು ನನ್ನ ಕೋರಿಕೆಯನ್ನು ಖಂಡಿತ ನಡೆಸಿಕೊಡಲು ಯತ್ನಿಸುವೆನೆಂದು ಆಶ್ವಾಸನವಿತ್ತರು. ನನಗೀಗ ನೌಕಾಶಾಖೆಯಲ್ಲಿ ಸಂಬಳ ಸಿಗುವಂತಹ ಕೆಲಸವನ್ನು ಸಧ್ಯದಲ್ಲಿ ವಿದ್ಯಾಶಾಖೆಯಲ್ಲಿ ಕೊಡುವದು ಅಶಕ್ಯವೆಂದರು. ಆದರೂ ಪ್ರಯತ್ನಮಾಡಿ ನೋಡುವೆನೆಂದು ಹೇಳಿದರು.

ಆದುದರಿಂದ ನನಗೀಗ ಬರುವ ಫ್ರಾಂಕುಗಳ ವರುಷ ಸಂಬಳವು, ವಿದ್ಯಾಖಾತೆಯಲ್ಲಿ ದೊರೆಯದೇಹೋದರೆ ಈ ಹೊಸ ಕೆಲಸಕ್ಕೆ ಹೋಗುವುದು ಲಾಭದಾಯಕವಾಗಲಾರದು. ಇದಲ್ಲದೆ ನನ್ನ ತಂದೆಯವರು ಬೇಗ ನಿವೃತ್ತರಾಗುವರು. ಅವರಿಂದ ದೊರೆಯುತ್ತಿರುವ ೬೦೦ ಫ್ರಾಂಕುಗಳ ವರುಷಾಸನವೂ ನಿಂತುಹೋಗಬಹುದು. ಈ ವರುಷ ಇದೇ ಕಛೇರಿಯಲ್ಲಿ ನನ್ನ ಸಂಬಳ ೨೪೦೦ ಕ್ಕೆ ಹೆಚ್ಚಬಹುದು. ಈಗ ಬರುವ ಈ ವೇತನದಿಂದ ನನ್ನ ಜೀವನ ಸಾಗಿಸುವುದೇ ಕಷ್ಟವಾಗಿರುವಾಗ, ಮತ್ತೆ ಕಡಿಮೆ ಸಂಬಳದ ಮೇಲೆ ಮತ್ತೊಂದು ಕೆಲಸಕ್ಕೆ ಹೋಗುವ ಮಾತು ನನಗೇಕೋ ಸರಿಯೆನಿಸುವುದಿಲ್ಲ. ತಮ್ಮ ಸಲಹೆ ಏನೆಂಬುದನ್ನು ಸೂಚಿಸಿ ಮಾರ್ಗದರ್ಶಕರಾದರೆ, ಈ ನಿಮ್ಮ ನೆರವನ್ನೆಂದಿಗೂ ಮರೆಯಲಾರೆ. ನನಗಿಂತಲೂ ಈ ನಗರದಲ್ಲಿ ವಾಸಿಸುವ ಸಾಮಾನ್ಯ ಕೆಲಸಗಾರನು ಸುವ್ಯವಸ್ಥಿತ ಸ್ಥಿತಿಯಲ್ಲಿರುವನು. ಅವನ ವರುಷದ ಆದಾಯ ನನಗಿಂತಲೂ ಹೆಚ್ಚು, ಅವನ ಖರ್ಚು ಕಡಮೆ. ಇದರಿಂದ ತಮ್ಮ ಮುಂದೆ ಬರೆಹಗಾರರ ಈ ಕೀಳು ಪರಿಸ್ಥಿತಿಯೇನೆಂಬುವುದನ್ನು ತಮಗೆ ತಿಳಿಯಲೆಂದು ಬರೆದಿರುವೆನು. ಬೇರೆ ಭಾವಿಸದೆ, ನಿಮ್ಮ ಸೂಕ್ತ ಸಲಹೆಗಳನ್ನು ಇತ್ತು ಪ್ರೋತ್ಸಾಹಿಸಬೇಕಾಗಿ ಕೋರುತ್ತೇನೆ.

ತಮ್ಮ ಆತ್ಮೀಯನು, —**ಗಾಯ್**

— ೯ —

[ ನೌಕಾ ಕಛೇರಿಯಿಂದ ಮೋಪಾಸಾನಿಗೆ ವಿದ್ಯಾಖಾತೆಯ ಮಂತ್ರಿಗಳ ಆಪ್ತ ಕಛೇರಿಗೆ ವರ್ಗವಾಯಿತು. ಇದಾದುದು ಫ್ಲಾಬೇರನ ನೆರವಿನಿಂದ; ಮಂತ್ರಿಗಳು ಇವರ ಆಪ್ತಮಿತ್ರರಾದುದರಿಂದ ಕಛೇರಿಯಲ್ಲಿ ಕೆಲದಿನ ಕೆಲಸ ಮಾಡಿದ ನಂತರ ಅವನು ಬರೆದ ಪತ್ರ. ]

ಪ್ಯಾರಿಸ್
೨೬-೧೨-೧೮೭೮

ವಿಶ್ವಾಸದ ಗುರುವೇ,

ತಮ್ಮ ನೆರವಿನಿಂದ ನಾನು ಆ ಪಾಳು ನೌಕಾ ಕಛೇರಿಯಿಂದ ವಿದ್ಯಾ ಮತ್ತು ಸಂಸ್ಕೃತಿ, ಕಲೆಗಳ ಶಾಖಾ ಮಂತ್ರಿಯವರ ಕಚೇರಿಗೆ ಬಂದು ಕೆಲಸದಲ್ಲಿ ನೆಲೆಸಿದ್ದೇನೆ. ತಮ್ಮ ಸಹಾಯವಿರದಿದ್ದರೆ ಈ ಸುಖದ ಕೆಲಸ ನನಗೆ ದೊರೆಯುತ್ತಿರಲಿಲ್ಲ. ಈಗ ನನ್ನ ಕಛೇರಿಯ ಕೋಣೆ ಬಹು ಸುಂದರ ಸನ್ನಿವೇಶದಲ್ಲಿದೆ. ಅದರ ದೊಡ್ಡ ಕಿಟಕಿಯಿಂದ ಹೊರಗಡೆ ಇರುವ ಉಪವನದ ಪೂರ್ಣ ದೃಶ್ಯ ಕಂಡುಬರುತ್ತದೆ. ಅದರ ಮೇಲೆ ಹಾದುಬರುವ ದಿವ್ಯವಾದ ತಂಗಾಳಿ ನನಗೆ ಸಾಕಷ್ಟು ಉತ್ಸಾಹವನ್ನುಂಟುಮಾಡುತ್ತಿದೆ. ಅತಿ ಸುಂದರವಾದ ಪ್ಯಾರಿಸ ನಗರದ ದಿವ್ಯ ಸೌಧಗಳೂ, ಚೆಲುವಾದ ರಸ್ತೆಗಳೂ, ನನ್ನ ಕಣ್ಣಿಗೆ ಹಬ್ಬವನ್ನುಂಟುಮಾಡಿವೆ. ಅಂತೂ ಆ ನೌಕಾ ಕಛೇರಿಯ ನೀಚ, ಕೊಳಕು ಹವೆಯಿಂದ ಇಲ್ಲಿಗೆ ಬಂದುದು ನನಗೆ ಆನಂದದಾಯಕವಾಗಿದೆ. ಈ ವೈಭವವು ಇನ್ನೆಷ್ಟು ದಿನಗಳವರೆಗೆ ಉಳಿಯುವುದೋ ತಿಳಿಯೆ? ನನಗೆ ವರುಷಕ್ಕೆ ೧೮೦೦ ಫ್ರಾಂಕುಗಳನ್ನು ಸಂಬಳವಾಗಿ ಕೊಡುವರಂತೆ. ಮುಂದೆ ಇದೇ ಕೆಲಸದಲ್ಲಿ ಖಾಯಂ ಆದರೆ ಸಂಬಳವೂ ಹೆಚ್ಚಬಹುದು; ಅದರೊಂದಿಗೆ ಇತರ ಅಲವನ್ಸುಗಳೂ ಕೂಡಿ ಬರುವ ಸಂಭವವಿದೆ.

ನಿಮ್ಮ ಮಿತ್ರರಾದ ಮಂತ್ರಿವರ್ಯ ಎಂ. ಬೋರ್ಡೋ ಇವರು ಪದವಿಯಲ್ಲಿರುವವರೆಗೆ ನನಗೆ ೧೮೦೦ ಫ್ರಾಂಕುಗಳು ಸಂಬಳವಾಗಿಯೂ, ೧೦೦೦ ಫ್ರಾಂಕುಗಳು ಮಂತ್ರಿಯ ಉಪಕಾರ್ಯದರ್ಶಿಯ ಅಲವೆನ್ಸಿನಿಂದೂ, ೫೦೦ ಫ್ರಾಂಕುಗಳು ಬೋನಸ್ ರೂಪವಾಗಿಯೂ ಮುಂದೆ ನನಗೆ ಪ್ರತಿ ವರುಷ ಬರಬಹುದು. ಆದರೆ ಈಗಿನ ಮಂತ್ರಿಮಂಡಲವು ಪದಚ್ಯುತವಾಯಿತೆಂದರೆ, ಇವು ಯಾವೂ ದೊರೆಯುವಂತಿಲ್ಲ; ಕೇವಲ ಸಂಬಳ ಮಾತ್ರ.

ನನಗಿನ್ನೂ ಮಂತ್ರಿವರ್ಯರ ದರ್ಶನವಾಗಿಲ್ಲ. ಅವರ ಆಪ್ತ ಕಾರ್ಯದರ್ಶಿಯವರನ್ನು ದಿನವೂ ಕಾಣುತ್ತಿದ್ದೇನೆ. ಅವರು ನನಗೆ ಸಾಕಷ್ಟು ನೆರವನ್ನೀಯುತ್ತಿರುವರು; ಮುಂದೆಯೂ ಸಹಾಯಕರಾಗುವರೆಂಬುದು ಖಂಡಿತ. ನನ್ನ ಅಭಿರುಚಿಗೆ ಅನುಕೂಲವಾದ ಕೆಲಸವು ದೊರೆತಿದೆ. ಅದನ್ನು ದಕ್ಷತೆಯಿಂದ ನಿರ್ವಹಿಸಿ, ನನ್ನ ಸ್ವಸಾಮರ್ಥ್ಯದಿಂದ ಇದರಲ್ಲಿಯೇ ಪ್ರಗತಿಹೊಂದಲು ಯತ್ನಿಸುವೆನು.

ಮುಂಜಾನೆ ೬-೩೦ ಗೆ ಎದ್ದೆನೆಂದರೆ ಬಿಡುವಿಲ್ಲದಂತೆ ದುಡಿಯುತ್ತಿದ್ದೇನೆ. ೯-೩೦ ಯಿಂದ ಸಂಜೆ ೬-೩೦ ಯ ವರೆಗೆ ಕಛೇರಿಯಲ್ಲಿ ದುಡಿತ. ದಣಿದು ಕೋಣೆಗೆ ಬಂದೆನೆಂದರೆ ಮುಂದೇನೂ ಮಾಡಲು ಮನಸ್ಸೇ ಬರುವುದಿಲ್ಲ. ಕೆಲ ಸಮಯದ ನಂತರ ನನ್ನ ಹೆಸರು ಸಿವಿಲ್ ಲಿಸ್ಟಿನಲ್ಲಿ ಸೇರಿಸಿದರೆಂದರೆ, ಆಗ ನನಗೆ ಬಿಡುವೂ, ಕೊಂಚ ಸ್ವಾತಂತ್ರ್ಯವೂ ದೊರೆಯಬಹುದು.

ಕಛೇರಿಯಲ್ಲಿ ನನ್ನನ್ನು ಎಲ್ಲರೂ ಮರ್ಯಾದೆಯಿಂದ ಕಾಣುತ್ತಿರುವರು; ಮೇಲಧಿಕಾರಿಗಳು ನನ್ನಲ್ಲಿ ಅಂತಃಕರಣ, ಅಭಿಮಾನಗಳನ್ನು ತೋರುತ್ತಿರುವರು. ಸಹೋದ್ಯೋಗಿಗಳು ಮಾತ್ರ ನಾನೊರ್ವ ಪ್ರಪಂಚವನ್ನರಿಯದ ದಡ್ಡನೆಂದು, ಸಾಮಾನ್ಯ ಪ್ರವೃತ್ತಿಯವನೆಂದು ಭಾವಿಸಿರುವರು. ನನ್ನ ಈ ವಾತಾವರಣವೆಲ್ಲವೂ ಬಹು ಸೋಜಿಗವೆನಿಸುತ್ತವೆ; ಮತ್ತು ಒಳಗೊಳಗೇ ನನಗೆ ನಗು ಬರುತ್ತಿದೆ; ಎಲ್ಲವೂ ದುಃಖಮಯವೆನಿಸುತ್ತದೆ. ಈ ಬಗೆಯ ಮಾನಸಿಕ ಗೊಂದಲ ಹುಚ್ಚೆಬ್ಬಿಸುತ್ತಿದೆ. ಇಲ್ಲಿಯ ಜಗತ್ತೆಲ್ಲವೂ ಕೇವಲ ಸ್ವಾರ್ಥಮಯವಾಗಿರುವದಲ್ಲದೆ, ತುಂಬಾ ಅಸಹ್ಯವೆನಿಸತೊಡಗಿದೆ.

ಭಾನುವಾರವೂ ಮಂತ್ರಿಯ ಆಪ್ತವರ್ಗದಲ್ಲಿ ಕೆಲಸ ಮಾಡುವ ಗುಮಾಸ್ತರು ಕಛೇರಿಗೆ ಬಂದು ಕೆಲಸ ಮಾಡಬೇಕಾಗಿದೆ. ಕೆಲದಿನಗಳಾದ ನಂತರ ಈ ಕೆಲಸದ ಪರಿಚಯವಾಯಿತೆಂದರೆ, ಎಲ್ಲವೂ ಸುರಕ್ಷಿತವಾಗಿ ಮುಂದರಿಯುವುದೆಂದು ನನ್ನ ಊಹೆ. ನನ್ನ ಈ ಕಛೇರಿಯ ಕೆಲಸವು ಅಷ್ಟೇನೂ ಕಷ್ಟಕರವಲ್ಲ. ಪತ್ರ ಬೆಳೆಯಿತು ಮತ್ತೆ ಬರೆಯುವೆ. ಇಲ್ಲಿಗೆ ಸಾಕಲ್ಲವೆ. ನಮಸ್ಕಾರ.

ನಿಮ್ಮ ಹತ್ತಿರದವ, —ಗಾಯ್

— ೧೦ —

[ ಮೋಪಾಸಾನು ಕ್ರೋಸಿಯೋವಲ್ಲಿದ್ದ ಗುರುವಿಗೆ ಆದಿತ್ಯವಾರಕ್ಕೊಮ್ಮೆ ತಪ್ಪದೆ ಪತ್ರ ಬರೆಯುತ್ತಲಿದ್ದ. ಅವನನ್ನು ಸಮಕ್ಷಮ ಕಾಣದಂತಹ ಸಮಯಗಳಲ್ಲಿ ಈ ಸಾಹಿತ್ಯೋಪಾಸಕರು ಮಾತನಾಡಿಕೊಳ್ಳುತ್ತಿದ್ದರು. ಒಲುಮೆ ಸಲುಗೆಗಳು ಇವರಿಬ್ಬರಲ್ಲಿ ಬೆಳೆಯಲು ಈ ಪತ್ರಗಳೇ ಕಾರಣ. ಯಾವ ಹೊಸ ಕಾರ್ಯವನ್ನಾದರೂ ತನ್ನ ಗುರುವಿಗೆ ತಿಳಿಸದೆ ಮಾಡುತ್ತಿರಲಿಲ್ಲವೆಂಬುದು ಈ ಪತ್ರದಿಂದ ವ್ಯಕ್ತವಾಗುತ್ತದೆ. ]

೧೮—೨—೧೮೭೯

**ವಿಶ್ವಾಸದ ಪೂಜ್ಯರೇ,**

ಈ ಕೆಲಸದ ಗಡಿಬಿಡಿಯಲ್ಲಿಯೇ ತಮಗೊಂದು ಪತ್ರವನ್ನು ಅವಸರದಿಂದ ಬರೆಯುತ್ತಿದ್ದೇನೆ. ಬಹಳ ಗಡಿಬಿಡಿಯಲ್ಲಿದ್ದೇನೆ. ಈ ಗಡಿಬಿಡಿಯಲ್ಲಿ ಜತೆಗೆ ನನ್ನ ಹೊಸ ನಾಟಕ ನಾಳೆಯೇ ರಂಗಭೂಮಿಯ ಮೇಲೆ ಪ್ರದರ್ಶನಕ್ಕೆ ಬರಲಿದೆ. ನನ್ನ ಮಿತ್ರರನ್ನು ಕೆಲವರನ್ನು ಆಮಂತ್ರಿಸಿರುವೆನು. ಅವರವರ ಸ್ಥಳವನ್ನು ಏರ್ಪಡಿಸುವ ಕೆಲಸವೂ ನನ್ನದೇ ಆಗಿದೆ. ಇದೊಂದು ಬಹು ತೊಂದರೆಯ ಕೆಲಸ. ನಾಟಕ ಯಶಸ್ವಿಯಾಗುವುದೆಂದು ನನ್ನ ನಂಬಿಕೆ.

ತಮ್ಮನ್ನು ಕಾಣಲು ಮನಸ್ಸು ಕಾತುರಗೊಂಡಿದೆ. ನೌಕಾ ಕಛೇರಿಯಲ್ಲಿದ್ದಾಗ ದೊರೆಯುತ್ತಿದ್ದ ರೈಲು ಪ್ರವಾಸದ ರಿಯಾಯತಿ ಈಗ ದೊರೆಯುವದಿಲ್ಲ. ಆಗ ನಾನೋರ್ವ ಸಾಮಾನ್ಯ ನೌಕರನು. ಈಗ ಮಂತ್ರಿಯವರ ಆಪ್ತವರ್ಗದವನೆಂದ ಮೇಲೆ ಎರಡನೇ ತರಗತಿಯಲ್ಲಿಯೇ ಪ್ರಯಾಣ ಮಾಡಬೇಕು. ದಿನವೂ ಏಳೆಂಟು ಫ್ರಾಂಕುಗಳನ್ನು ಊಟ ತಿಂಡಿಗಳಿಗೆ ವೆಚ್ಚಮಾಡಿ, ವಾರಕ್ಕೊಂದು ಸಲ ಇಂತಹ ಪ್ರವಾಸಕ್ಕೆ (ಅಂದರೆ ನಾಲ್ವತ್ತು ಫ್ರಾಂಕುಗಳಾಗಬಹುದು.) ಹಣ ನನ್ನಲಿಲ್ಲ. ಆದರೂ ಬೇಗ ಬರಲು ಯತ್ನಿಸುವೆನು. ಮೇಲೆ ಈ ನಾಟಕವನ್ನು ರಂಗಭೂಮಿಯ ಮೇಲೆ ಪ್ರದರ್ಶನಕ್ಕೆ ಅಣಿಮಾಡಬೇಕಾದರೆ ಈಗಾಗಲೇ ೬೦ ಫ್ರಾಂಕುಗಳು ಮಾಯವಾಗಿವೆ. ಈ ನಾಟಕವು ಒಂದು ವೇಳೆ ಯಶಸ್ವಿಯಾದರೆ ನನ್ನ ಹಣ ಮತ್ತು ಕೀರ್ತಿಗಳು ದೊರೆಯುವವು. ಇಲ್ಲವಾದರೆ ವೃಥಾ ಹಣದ ವೆಚ್ಚದ ಜತೆಗೆ ಅಪಕೀರ್ತಿ; ಮನಸ್ಸಿಗೆ ವ್ಯಥೆ.

ಹೇಗಾದರೂ ಮಾಡಿ ಈ ತಿಂಗಳ ಕೊನೆಯಲ್ಲಾದರೂ ತಮ್ಮಲ್ಲಿಗೆ ಒಂದು ದಿನ ಬಂದುಹೋಗುವೆನು.

**ಮಮತೆಯಿರಲಿ ನಿಮ್ಮವ, —ಗಾಯ್**

— ೧೧ —

[ ಈ ಪತ್ರದಲ್ಲಿ ಮೇಲಿನ ಪತ್ರದ ವಿಷಯಗಳೇ ಇವೆ. ಆದರೆ ಸಾಹಿತ್ಯದಲ್ಲಿ ಮಾರ್ಗದರ್ಶಕರಾದ ಈ ಹಿರಿಯರಿಬ್ಬರಲ್ಲಿ ವೈಷಮ್ಯವಿತ್ತೆಂಬ ಮಾತು ವ್ಯಕ್ತವಾಗುತ್ತದೆ. ಇದು ಗುಪ್ತವಾದ ವಿಚಾರ. ಝೋಲಾನ ಕೃತಿಗಳನ್ನು ಮೆಚ್ಚಿದರೂ ಫ್ಲಾಬೇರನಿಗೆ ದೊರೆತ ಸತ್ಕಾರ, ಮರ್ಯಾದೆಗಳ ಬಗ್ಗೆ ಅವನು ತೋರಿದ ಜಿಗುಪ್ಸೆಗೆ ಮೋಪಾಸಾನನು ಆತನನ್ನು ಸ್ಪಷ್ಟವಾಗಿ ಖಂಡಿಸಿರುವನು. ]

೨೪—೪—೧೮೭೯

**ಪೂಜ್ಯರೇ,**

ಕಛೇರಿಯ ಕೆಲಸ ಬಹಳ ಹೆಚ್ಚುತ್ತಿದೆ; ಬಿಡುವು ಸಿಗುವುದೇ ಇಲ್ಲ. ಇಂದು ತಮಗೆ ಪತ್ರ ಬರೆದೇ ತೀರಬೇಕೆಂಬ ನಿರ್ಧಾರದಿಂದ ಒಂದು ಅರ್ಧ ಗಂಟೆಯ ಬಿಡುವು ಮಾಡಿಕೊಂಡು ಪತ್ರ ಬರೆಯುತ್ತೇನೆ. ಶ್ರೀಯುತ ಚಾರ್ಮ್ಸ್‌ರವರು ನನ್ನೊಂದಿಗೆ ಬಹು ವಿಶ್ವಾಸದಿಂದ ನಡೆದುಕೊಳ್ಳುತ್ತಿರುವರು. ನಮ್ಮೀರ್ವರಲ್ಲಿ ಅಧಿಕಾರದ ವಿಷಯದಲ್ಲಿ ಸರಿಸಮಾನತೆ ಬೆಳೆಯತೊಡಗಿದೆ. ನನಗೊಂದು ಪ್ರತ್ಯೇಕ ಕೋಣೆಯನ್ನಿತ್ತಿರುವರು. ಅವರ ಕೆಲಸದ ಕೊಂಚ ಭಾಗ ನಾನೇ ಮಾಡಬೇಕಾಗುತ್ತದೆ. ಮುಂಜಾವಿನಿಂದ ಸಂಜೆಯ ವರೆಗೆ ಬಿಡುವಿಲ್ಲದೆ ದುಡಿಯುತ್ತಿದ್ದೇನೆ. ವಿದ್ಯುತ್ ಬೆಲ್‌ನಂತೆ ವಿಧೇಯತೆಯಿಂದ ಯಂತ್ರದಂತೆ ದುಡಿಯುವುದೇ ನನ್ನ ಕೆಲಸ. ನೌಕಾ ಕಛೇರಿಯಂತೆ ಇಲ್ಲಿಯೂ ಕೆಲಸ ಹೆಚ್ಚು. ಆದರೆ ಇಲ್ಲಿಯ ಕೆಲಸ ಮನಸ್ಸಿಗೆ ಆನಂದವನ್ನುಂಟು ಮಾಡುತ್ತದೆ. ನಮ್ಮ ಬುದ್ಧಿ ಕುಶಲತೆಗೆ ಇಲ್ಲಿ ಅನುವಿದೆ; ಜಾಣತನವನ್ನು ವ್ಯಕ್ತಮಾಡಲು ಅವಕಾಶವಿದೆ. ಈ ಕೆಲಸದಲ್ಲಿ ವೈವಿಧ್ಯವಿದೆ; ನಾಜೂಕುತನವಿದೆ; ಇಲ್ಲಿ ನನಗೆ ಒಳ್ಳೇ ಜನರ ಗೆಳೆತನವಾಗಲು ಶಕ್ಯವಿದೆ. ನಾನು ಭಾವಿ ಸಾಹಿತಿಯಾಗುವೆನೆಂಬುದು ಚಾರ್ಮ್ಸ್‌ರಿಗೆ ಪ್ರಿಯವಾದಂತಹ ವಿಷಯ

ವಾಗಿದೆ. ನಾಟಕದ ದಿನ ಅವನ ನೆರವಿನಿಂದ ನನಗೆ ಮಧ್ಯಾಹ್ನ ಬಿಡುವು ಸಿಗುವುದು. ನನಗೆ ಎಲ್ಲ ವಿಧದಲ್ಲಿಯೂ ಸಹಾಯಕನಾಗುವೆನೆಂದು ಹೇಳಿರುವರು. ಯಾವ ಬಗೆಯಾಗಿ ನೆರವಾಗುವರೋ ನೋಡಬೇಕು. ನನ್ನ ಬಗ್ಗೆ ಅವರಿಗಿರುವ ಈ ಒಳ್ಳೆಯ ಅಭಿಪ್ರಾಯ ಕೊನೆಯವರೆಗೆ ಉಳಿಯಲೆಂದು ಹಾರೈಸುತ್ತೇನೆ.

ನಿಮ್ಮ ವಿಷಯ. ನಿಮ್ಮ ನೆರವಿಗೆ ಯಾರು ತಾನೇ ಬರುವುದಿಲ್ಲ? ನಿಮಗೆ ಈಗ ಒದಗಿರುವ ಈ ಸಂಕಟ ಸಮಯದಲ್ಲಿ ಮಂತ್ರಿವರ್ಯರ ಸಲಹೆಯ ಮೇರೆಗೆ ನಿಮ್ಮನ್ನು ಮಾಜಾರಿನ್ ಲೈಬ್ರರಿಯ ಅಧಿಕಾರಿಯನ್ನಾಗಿ ನೇಮಿಸಿ ನಿಮಗೆ ವರುಷ ೫೦೦೦ ಫ್ರಾಂಕುಗಳನ್ನು ಗೌರವ ಸಂಭಾವನೆಯಾಗಿ ಕೊಡಬೇಕೆಂದು ನಿರ್ಧರಿಸಿರುವರು. ಈ ಬಗೆಯ ಗೌರವ ವೇತನವನ್ನು ಪಡೆಯುವ ಸಾಹಿತಿಗಳ ಸಂಖ್ಯೆ ಈಗ ಹೆಚ್ಚುತ್ತಿದೆ. ನಿಮ್ಮ ಗೆಳೆಯರಾದ ಮಂತ್ರಿವರ್ಯರೇ ಆಸ್ಥೆ ತೋರಿಸಿರುವುದರಿಂದ ನಿಮಗೆ ೫೦೦೦ ಫ್ರಾಂಕುಗಳನ್ನು ಕೊಡಲು ನಿಶ್ಚಯಿಸಿರುವರು. ನೀವು ಅದೃಷ್ಟವಂತರೆಂದು ನನ್ನ ಭಾವನೆ.

ಇನ್ನು ಝೋಲಾ ಮಹಾಶಯರ ಮಾತು. ಅವರಿಗೆ ತಲೆ ಸಮವಿಲ್ಲವೆಂದು ನನಗೆನಿಸುತ್ತಿದೆ. ವಿಕ್ಟರ್ ಹ್ಯೂಗೋರ ಬಗ್ಗೆ ಅವರು ಬರೆದ ಲೇಖನವನ್ನು ಓದಿದಿರಾ? ಇತರ ಕವಿಪುಂಗವರ ಬಗ್ಗೆ ಅವರು ಬರೆದಿರುವ ಲೇಖನಗಳನ್ನು ನೀವು ಓದಿರಬಹುದು? ರಿಪಬ್ಲಿಕ್‌ದಲ್ಲಿ ಪತ್ರಿಕೆಯಲ್ಲಿ "ಸಾಹಿತ್ಯ" ಎಂಬ ಅವರ ಲೇಖನದಲ್ಲಿ ಅವರು ಹೇಳಿದ ವಿಷಯಗಳು ಹುಚ್ಚನ ಪೇಚಾಟವಾಗಿವೆ. ಮತಿ ವಿಭ್ರಮಣೆದಿಂದ ಹೇಗೇಗೋ ಬರೆದಿರುವಂತೆ ಕಂಡುಬರುತ್ತದೆ. "'ರಿಪಬ್ಲಿಕ್', ಪತ್ರಿಕೆಯು ಸತ್ಯ ಸಾಹಿತ್ಯವನ್ನು ಎತ್ತಿಹಿಡಿಯಲಿ, ಹಿಡಿಯದಿರಲಿ, ನಾನು ಮಾತ್ರ ಅದರ ಆರಾಧನೆಯನ್ನು ಬಿಡುವವನಲ್ಲ. ನಾನೊಬ್ಬ ವಿಜ್ಞಾನದ ಉಪಾಸಕ. ಸಮಾಜದಲ್ಲಿಯ ಲೋಪದೋಷಗಳನ್ನು ತಿದ್ದಿ ಜನರ ಜೀವನ ಮಾರ್ಗವು ನಿಸರ್ಗದ ಉಪಾಸನೆಯಲ್ಲಿ ನಿರತವಾಗುವಂತೆ ಮಾಡುವುದೇ ನನ್ನ ಕರ್ತವ್ಯ. ಈ ನನ್ನ ನಿಸರ್ಗವಾದವೆಂದಿಗೂ ಸುಳ್ಳಾಗಲಾರದು. ಈ ವಾದದಲ್ಲಿ ತತ್ವವಿದೆ. ಸತ್ಯ ಪ್ರತಿಪಾದನೆಯಿದೆ''

ಎಂದು ಹೇಳುವ ಅರ್ಥವಿಲ್ಲದ ಇವರ ಒಣ ಪೇಚಾಟ ಜನರನ್ನೆಲ್ಲಿಗೆ ಒಯ್ಯುವುದೋ ತಿಳಿಯದಂತಿದೆ.

ತಮ್ಮನ್ನು ಕಂಡು ಸಂತೋಷದಲ್ಲಿ ಒಂದು ದಿನ ಕಳೆಯಬೇಕೆಂದು ನನ್ನ ಹಂಬಲವಾಗಿದೆ. ಈ ವಾತಾವರಣ ಬೇಸರವೆನಿಸಿದೆ. ಹೆಚ್ಚಿನ ಕೆಲಸದಿಂದ ನನ್ನ ಪ್ರಕೃತಿಯೂ ಕೆಡಹತ್ತಿದೆ. ಡಾಕ್ಟರರು ವಿಶ್ರಾಂತಿ ಅವಶ್ಯವೆಂದು ಹೇಳಿರುವರು. ರಕ್ತ ಕೊರತೆಯಿಂದ ನನ್ನ ಯೋಜನಾಶಕ್ತಿ, ಕೆಲಸದಲ್ಲಿ ಆಸಕ್ತಿ ಕಡಿಮೆಯಾಗತೊಡಗಿದೆ. ವ್ಯಾಯಾಮ, ವಿಶ್ರಾಂತಿ, ಬೆಳಕು, ಗಾಳಿ, ನನಗೆ ಹೆಚ್ಚು ಬೇಕು ಎಂದು ಅನೇಕ ವೈದ್ಯ ಮಿತ್ರರು ಸೂಚಿಸಿದ್ದಾರೆ. ಆದರೆ ಈ ಬಗೆಯ ವಿರಾಮ ದೊರೆಯುವದೆಂತು? ಕಛೇರಿಯಲ್ಲಿ ಆಳಾಗಿ ಬಾಳು ಹಾಳಾಗುತ್ತಿರುವಾಗ ಸಾಹಿತ್ಯಕ್ಕೆ ನನ್ನಿಂದ ಯಾವ ಉಪಕಾರಬೇಕು? ಎಲ್ಲವೂ ಕಗ್ಗತ್ತಲು ದಾರಿಗಾಣದೆ ಅಲೆಯುತ್ತಿದ್ದೇನೆ. ಎಂದಿಗೆ ನನಗೆ ವಿಮೋಚನೆಯೋ? ನಿಮ್ಮ ಧೈರ್ಯದ ಮಾತುಗಳೇ ನನಗೆ ಊರುಗೋಲು. ಪತ್ರ ಬರೆಯದಿರಬೇಡಿ. ನಮಸ್ಕಾರ.

**ತಮ್ಮ ನಚ್ಚಿನ ಶಿಷ್ಯ, —ಗಾಯ್**

— ೧೨ —

[ ಸಾಹಿತಿಗಳಿಗೂ ಪತ್ರಿಕಾಕರ್ತರಿಗೂ ಇದ್ದ ಪರಸ್ಪರ ಭೇದ-ಭಾವಗಳನ್ನು ಈ ಪತ್ರ ಸೂಚಿಸುತ್ತದೆ. ಸಾಹಿತಿಯು ನಾಡನ್ನು ಸುಧಾರಿಸುವ ಶಕ್ತಿ ಪುರುಷನೆಂಬುವ ತತ್ವವನ್ನು ಇಲ್ಲಿ ಪ್ರತಿಪಾದಿಸಿರುವನು. ಜನರನ್ನು ತಿದ್ದಬೇಕಾದರೆ ಅಂಜದೆ, ಅಳುಕದೆ ಸತ್ಯಪ್ರತಿಪಾದನೆಗೆ ತಾನು ಕಂಕಣಬದ್ಧನು ಎಂಬುವನ್ನು ಇಲ್ಲಿ ಸೂಚಿಸಿರುವನು. ಗುರುವಿನ ಆಶೀರ್ವಾದ ಬಲದಲ್ಲಿ ನಂಬಿಕೆಯುಳ್ಳವನೆಂಬುವುದೂ ವ್ಯಕ್ತವಾಗುತ್ತದೆ.]

ಪ್ಯಾರಿಸ್
೨-೧೨-೧೮೭೯

**ಪೂಜ್ಯರಲ್ಲಿ ಅರಿಕೆಗಳು,**

ಸಂಪಾದಕೀಯರಾದ ಆಡಮರವರಿಂದ ಬಂದ ಪತ್ರವನ್ನು ಇಲ್ಲಿರಿಸಿದ್ದೇನೆ. ನನ್ನ (Vennes Ruiti) "ವೀನಸ್‌ದ ರೈತ"ನೆಂಬ ಕವನವನ್ನು ಪ್ರಕಟಿಸದೇ ಇದ್ದುದಕ್ಕೆ ಅವರಿತ್ತ ಸಮಾಧಾನ ಸಮಂಜಸವಾಗಿಲ್ಲ.

ನಿನ್ನೆ ಅವರನ್ನು ನೋಡಲು ಹೋಗಿದ್ದೆ. ನನ್ನ ಕವನದ ಹಸ್ತಪ್ರತಿಯನ್ನು ನನಗೆ ಕೊಟ್ಟು ಸ್ವಲ್ಪ ಕ್ಷಮೆಯ ಹೇಳಿಕೊಳ್ಳುತ್ತಿದಳು. ಒಳ್ಳೇಚತುರಳು. "ನೋವೆಲೋ ರೋವೇ" ಎಂಬ ಪತ್ರಿಕೆಯನ್ನು ರಾಜಕೀಯ ಒಂದು ಪಕ್ಷದ ಅಭಿಪ್ರಾಯಗಳನ್ನು ಎತ್ತಿಹಿಡಿದು ಮುಂದರಿಯಬೇಕೆಂಬ ನಿರ್ದಿಷ್ಟ ಅಭಿಪ್ರಾಯದಿಂದ ನಡೆಸುತ್ತ ಬಂದಿರುವುದರಿಂದ ನನ್ನ ಪತ್ರಿಕೆಯ ಧ್ಯೇಯಗಳಿಗೆ ವಿರುದ್ಧ ಭಾವನೆಯ ಲೇಖನ ಕವನಗಳನ್ನು ಪ್ರಕಟಿಸಲು ಸಾಧ್ಯವಿಲ್ಲೆಂದು ಬಹು ವಿಷಾದದಿಂದ ಹೇಳಿದಳು. ತನ್ನ ಪತ್ರಿಕೆಯ ಧೋರಣೆಗೆ ಅನುಸರಿಸಿ ಏನನ್ನಾದರೂ ಬರೆದುಕೊಡಬೇಕೆಂದು ಸೂಚಿಸಿದಳೂ. "ನನ್ನ ಪತ್ರಿಕೆಯ ಅಭಿಮಾನಿಗಳೂ, ಅವರ ಆಶ್ರಯಿಗಳೂ, ಓದುಗರ ಅಭಿರುಚಿಗೆ ಅನುಸರಿಸಿ ಬರೆಯಬೇಕಾದುದು ನಿಮ್ಮ ಕರ್ತವ್ಯ. ಸಂಪಾದಕಿಯೆಂದು ನನಗೆ ಯಾವ ಬಗೆಯ ಸ್ವಾತಂತ್ರ್ಯವಿಲ್ಲ. ನಮ್ಮ ಜನರ ಆಶೆ-ಆಕಾಂಕ್ಷೆಗಳು, ಅಭಿರುಚಿಗಳೇನೆಂಬುದು ನಾನಿಷ್ಟುದಿನ ಇಲ್ಲಿ ಕೆಲಸಮಾಡಿದಾಗ್ಯೂ ನನಗೇ ಅರ್ಥವಾಗದಂತಿವೆ. ನನ್ನ ಈ ನುಡಿಗಳಿಗೆ ಕ್ಷಮಿಸಿ" ಎಂದು ಹೇಳಿದಳು.

ಇದೇನು ಅವಸ್ಥೆ ? ಸಾಹಿತಿಯ ಪರಿಸ್ಥಿತಿ ಈ ಬಗೆಯ ಕೀಳು ದರ್ಜೆಯದೇ ? ಅವನ ಅಭಿಪ್ರಾಯಗಳನ್ನು ಜನರಿಗೆ ತಿಳಿಸುವ ಅಧಿಕಾರ ಅವನಿಗಿಲ್ಲವೇ? ಸಾಮಾನ್ಯಜನರ ಅಭಿರುಚಿಗಳಿಗೆ ತಕ್ಕಂತೆ ಬರೆಯುವ ಹೇಡಿತನ ನಮ್ಮಲ್ಲಿ ಮೂಡಬೇಕೇ ? ಈ ಬಗೆಯ ಹೇಡಿತನವೇಕೆ ? ಸಾಹಿತಿಯು ಸಮಾಜವನ್ನು ತಿದ್ದಬೇಕಲ್ಲದೆ, ಸಮಾಜವು ಸೂಚಿಸಿದಂತೆ ನಡೆದರೆ ಸಾಹಿತಿಯು ತನ್ನ ಧ್ಯೆಯವನ್ನು ಸಾಧಿಸಲಾರ. ಜನರ ತಿಳುವಳಿಕೆಯು ಸರಿಯಾದ ಮಾರ್ಗದಲ್ಲಿ ಹರಿದು, ಸಮಾಜದಿಂದ ಅನೇಕ ಚತುರರೂ, ಜ್ಞಾನಿಗಳೂ ಉದಯಿಸಿ ನಾಡು ಬೆಳೆಯುವಂತೆ ರಾತ್ರಿ-ಹಗಲೂ ದುಡಿಯಬೇಕಾದುದು ಸಾಹಿತಿಯ ಕೆಲಸವಾದರೂ, ಅವನ ಈ ಮಹತ್ಕಾರ್ಯಕ್ಕೆ ನೆರವಾಗಬೇಕಾದ ದೊಡ್ಡಗುಣ ಜನರಲ್ಲಿಯೂ ಇರಬೇಕಾದದ್ದು ಅವಶ್ಯವಲ್ಲವೇ ? ಈ ರೀತಿಯ ವಿಕಾಸಕ್ಕೆ ಜನರು ಸಿದ್ಧರಿರದೆ, ತಮ್ಮ ಸ್ವಾರ್ಥವನ್ನೇ ಸಾಧಿಸಲು, ಸಾಹಿತ್ಯದ ನೆರವು ಬೇಡಿದರೆ, ದೇಶದಲ್ಲಿ ಉತ್ತಮ ಸಾಹಿತ್ಯ ನಿರ್ಮಿತವಾಗುವುದಾದರೂ ಹೇಗೆ ? ಜನರು ಜಾಗೃತರಾಗಿ,

ಸಂಸ್ಕೃತರಾಗುವಂತೆ ದುಡಿಯಬೇಕಾದುದು ಸಾಹಿತಿಯ ಕೆಲಸವಾದರೂ, ಇದಕ್ಕೆ ಸರಿಯಾದ ಸಹಕಾರವೀಯುವದು. ಜನರ ಕರ್ತವ್ಯವೂ ಆಗಿರುತ್ತದೆ ಎಂಬ ಮಾತು ಅವರು ಮರೆಯಲಾಗದು.

"ರೋವೆನ್ ನಗರ ಮತ್ತು ಯುದ್ಧ"ದ ಬಗ್ಗೆ ಒಂದು ಕತೆಯನ್ನು ಬರೆಯತೊಡಗಿರುವೆನು. ಈ ಕತೆಯನ್ನು ಓದಿದ ಆ ಜನರು ನನ್ನನ್ನುದ್ವೇಷಿಸುವುದು ಖಂಡಿತ. ನನ್ನ ಜೀವನನ್ನು ಸುರಕ್ಷಿತ ಉಳಿಸಲಾರರೆಂದು ನನ್ನ ಭಾವನೆ. ಇರಲಿ. ನಿಮ್ಮ ಆಶೀರ್ವಾದವಿದ್ದಮೇಲೆ ನನಗೇಕೆ ಭಯ ?

ನಿಮ್ಮವನೇ-ಗಾಯ್.

— ೧೩ —

[ ಫ್ಲಾಬೇರನು ವಿಶ್ರಾಂತಿಗೆಂದು ಕ್ರೋಸಿಯೋದಲ್ಲಿರುವಾಗ ಪ್ಯಾರಿಸದಲ್ಲಿದ್ದ ಮೋಪಾಸಾ, ಮತ್ತು ಇತರ ಐವರು ಮಿತ್ರರು ಝೋಲಾನ ಹಿರಿತನದಲ್ಲಿ ಒಂದು ಕಥಾ ಸಂಕಲನವನ್ನು ಹೊರಡಿಸಿದರು. ಇದು ಪ್ರಕಟವಾಗುವ ಮುನ್ನ ಮೋಪಾಸಾನು ತಾನು ಬರೆಯಲಿರುವ ಕಥೆಯ ರೂಪರೇಷೆಯನ್ನು ಕುರಿತು ಬರೆದ ಪತ್ರ. ಸಂಕಲನದಲ್ಲಿ ಪ್ರಕಟವಾದ (Bomb do Serif) ಬೆಣ್ಣೆ ಮುದ್ದೆ ಎಂಬ ಕತೆ ಜಗದ್ವಿಖ್ಯಾತವಾಯಿತು. ಇದುವೇ ಅವನನ್ನು ಸಾಹಿತ್ಯರಂಗಕ್ಕೆ ಸಂಪೂರ್ಣವಾಗಿ ಸೆಳೆಯಿತು. ಸಾಹಿತಿಯು ತನ್ನ ಮೊದಲ ಕೃತಿಯನ್ನು ಬರೆಯುವಾಗ ತೋರುವ ಆಕಾಂಕ್ಷೆ, ನಿಷ್ಠೆ, ಮುಂದಿಟ್ಟುಕೊಂಡಿರುವ ಆದರ್ಶ, ಇವುಗಳೆಲ್ಲವೂ ಈ ಪತ್ರದಲ್ಲಿವೆ. ]

೫—೧—೧೮೮೦

ಆತ್ಮೀಯರೇ,

ಹಿಂದೆ ನಾನು ತಮ್ಮನ್ನು ಕ್ರೋಸಿಯೋದಲ್ಲಿ ಕಾಣಲು ಬಂದಾಗ ನಮ್ಮ ಸಂಯುಕ್ತ ಕಥಾ ಸಂಕಲನ ಬಗ್ಗೆ ಕೆಲವು ಮಾತುಗಳನ್ನು ವಿವರಿಸಿದ್ದೆ. ತಾವು ಮರೆತಂತಿದೆ ಇರಲಿ; ಮತ್ತೊಮ್ಮೆ ತಿಳಿಸುವೆನು. ನಾವು ಈಗ ಪ್ರಕಟಿಸುತ್ತಿರುವ ಕಥಾಸಂಕಲನ ಹೆಸರು, ( Sores Medan )"ಸೋರೀಸ್ ಮೆದಾನ್" ಝೋಲಾರವರ ಮನೆಯ ಹೆಸರಿನ ಹಿನ್ನೆಲೆ ಇದಕ್ಕಿದೆ. ಅವರೇ ಇದಕ್ಕೆ ಪ್ರೇರಕರು.

ಝೋಲಾರವರ ಈಗಿನ ವೈಯಕ್ತಿಕ ಅಭಿಪ್ರಾಯಗಳು ಪೂರ್ಣವಾಗಿ ಬದಲಾಗಿವೆ. ಅವರ ರೀತಿ ಹೀಗೆ ಮಾರ್ಪಾಡಾಗಲು ಕಾರಣ ನಾನರಿಯೆ.

ನನ್ನ ಸಾಹಿತ್ಯ ಜೀವನದ ಬಳ್ಳಿಯನ್ನು ಮೊದಲು, ನಂತರ ಅವರು ನೀರೆರೆದು ಪೋಷಿಸುತ್ತಿರುವಿರಿ. ನಿಮ್ಮಿಬ್ಬರಿಗೂ ನಾನು ಋಣಿ.

ಮತ್ತೊಂದು ಮಾತು–ನನ್ನ ಕವನ ಸಂಗ್ರಹ ವಿಷಯ. ಮುದ್ರಕರಾದ ಕಾರ್ಪೋಥಿಯನ್ನರು ಆ ಸಂಕಲನವನ್ನು ಇನ್ನೂ ನೋಡಿಲ್ಲವಂತೆ. ಅವರ ಈ ತಾತ್ಸಾರ ಪ್ರವರ್ತನೆ ನನಗೆ ಬೇಸರವನ್ನುಂಟುಮಾಡಿದೆ. ಅವರಿಗೆ ಹಣದ ಅಡಚಣೆಗಳು ಬರತೊಡಗಿರಬಹುದು. ಹುಸ್ಸೀಮನ್ನರಿಗೆ ಕೊಡಬೇಕಾಗಿರುವ ೮೦೦೦ ಫ್ರಾಂಕುಗಳನ್ನು ಇನ್ನೂ ಕೊಟ್ಟಿಲ್ಲವಂತೆ.

ನನ್ನ ಮಂತ್ರಿಗಳು ನನ್ನ ಕೆಲಸವನ್ನು ಮೆಚ್ಚಿ ರಿಬ್ಬನ್ ಆಫ್ ಆಫೀಸರ್ ಆಫ್ ಅಕೇಡಿಮಿಯನ್ನು ದಯಪಾಲಿಸಿರುವರು. ಇಂತಹ ರಿಬ್ಬನ್ನುಗಳನ್ನು ಧರಿಸುವುದರಿಂದೇನು ಪ್ರಯೋಜನ? ಸಂಬಳವನ್ನು ಹೆಚ್ಚಿಸುವುದರಲ್ಲಾಗಲಿ ಸಾಹಿತ್ಯ ಪ್ರಗತಿಗೆ ನೆರವಾಗುವುದರಲ್ಲಾಗಲಿ ಅವರು ಆಸಕ್ತಿ ತೋರಿದರೆ ಸರಿ.

ಹೆಚ್ಚಿನ ವಿಶೇಷಗಳೇನೂ ಇಲ್ಲ. ಮಾದಾ ಆಡಮ್‌ರಿಗೆ ಕೆಲದಿನಗಳ ಹಿಂದೆ ಕೆಲವು ಕವನಗಳನ್ನು ಕಳುಹಿಸಿದ್ದೆ. ಅವುಗಳು ಮುಟ್ಟಿದ ಬಗ್ಗೆ ಆ ಮಹಾರಾಯಳು ಒಂದು ಪತ್ರವನ್ನು ಸಹಾ ಬರೆದಿಲ್ಲ; ಓದುವ ಮಾತು ದೂರವೇ ಉಳಿದಿರಬಹುದು. ಡೆರೋಲೀಯವರ ಕವನಗಳೆಂದರೆ ಅವರಿಗೇಕೋ ಹೆಚ್ಚಿನ ಹುಚ್ಚೋ ನಾನು ತಿಳಿಯೆ. ಮತ್ತೆ ಬರೆಯುವೆ ನಮಸ್ಕಾರ.

**ತಮ್ಮ, —ಗಾಯ್**

— ೧೪ —

[ ಮೋಪಾಸಾನು ಬಂಧು, ಮಿತ್ರವರ್ಗಗಳಲ್ಲಿ ಹೆಚ್ಚಿನ ಪ್ರೀತಿಯನ್ನು ಗಳಿಸಿಕೊಂಡಿದ್ದನು. ಅವನ ಸ್ನೇಹ ಬಹು ಆತ್ಮೀಯವಾದುದು. ತನ್ನ ಎಲ್ಲ ವಿಷಯಗ

ಳನ್ನು ಗುರುವಿಗೆ ತಿಳುಹಿ ಆತನ ಸಲಹೆ, ಸೂಚನೆಗಳನ್ನು ಪಡೆದು ಮುಂದರಿಯುತ್ತಲಿದ್ದನೆಂಬುದು ಈ ಪತ್ರದಿಂದ ತಿಳಿದುಬರುತ್ತದೆ. ]

ಪ್ಯಾರಿಸ್ ಜಾನೆವರಿ ೧೮೮೦

ಪ್ರಿಯ ಗುರುವೇ,

ಇಂದು ಮಾದಾಂ ಕಾಮನ್‌ವಿಲ್ಲೇ ಇವರನ್ನು ಕಾಣಲು ಹೋಗಿದ್ದೆ. ಅವರಿಗೆ ಮೈ ಸ್ವಸ್ಥವಿರಲಿಲ್ಲ. ನಾನು ಈ ಮೊದಲೇ ಅಲ್ಲಿಗೆ ಹೋಗಬೇಕಿತ್ತು ಆದರೆ ಅದು ಸಾಧ್ಯವಾಗಲಿಲ್ಲ. ದಿನವೂ ಕಚೇರಿಯಿಂದ ಬರಬೇಕಾದರೆ ಸಂಜೆ ಆರು ಹೊಡೆಯುತ್ತದೆ. ಮೈ ಕೈ ದಣಿಯುವಂತೆ ದುಡಿದನಂತರ ಮನಸ್ಸಿಗೆ ಶಾಂತಿಯೇ ಇರುವದಿಲ್ಲ. ಸಂಜೆ ಕೆಲಸದನಂತರ ಮಿತ್ರರನ್ನು ಕಾಣಲು ಹೊರಡುವುದೆಂದರೆ ನನಗೆ ಬಲು ಬೇಸರ. ನಾನು ಅವರನ್ನು ಕಾಣುತ್ತಿಲ್ಲವೆಂದು ಮಿತ್ರರು ನನ್ನ ಮೇಲೆ ಕೋಪಗೊಂಡಿರುವರು. ಆದರೆ ನನ್ನ ಕಛೇರಿಯ ಕೆಲಸದ ವಿವರ, ನನಗೆ ಅಲ್ಲಿ ಆಗುತ್ತಿರುವ ಮಾನಸಿಕ ಆಯಾಸ, ಮುಂತಾದ ವಿವರಗಳ ಅರಿವು ಅವರಿಗೆಂತು ಆಗಬೇಕು? ಮಧ್ಯಾಹ್ನದ ಬಿಡುವಿನಲ್ಲಿ ಹೋಗಬೇಕೆಂದರೆ ಜನರು ನಿದ್ರೆಯಲ್ಲಿರಬಹುದು. ಇಲ್ಲವೇ ಕೆಲಸದ ಮೇಲೆ ಹೊರಗೆ ಹೋಗಲೂ ಬಹುದು. ಇದಲ್ಲದೆ ನನ್ನ ಕತೆಯೊಂದನ್ನು, ಮತ್ತು ಕೆಲವು ಕವನಗಳನ್ನು ಮುಗಿಸಲೇಬೇಕಿತ್ತು. ಆದುದರಿಂದ ಬಿಡುವುದೊರೆತಾಗಲೆಲ್ಲ ಆ ಕೆಲಸದಲ್ಲಿ ಮಗ್ನನಾಗುತ್ತಲಿದ್ದೆ. ಈ ಎಲ್ಲಾ ಕಾರ್ಯಗಳನ್ನು ತಿಳಿದ ನನ್ನ ಆಪ್ತರು ನನ್ನನ್ನು ಬೇರೆ ಭಾವಿಸಬಾರದು. ನನ್ನ ಏಳಿಗೆಯದೃಷ್ಟಿಯಿಂದ ಅವರು ನನಗೆ ಸರ್ವವಿಧದಲ್ಲಿಯೂ ನೆರವಾಗುವುದು ಅವರ ಕರ್ತವ್ಯವಲ್ಲವೇ ?

ನನ್ನ ಸ್ತ್ರೀಮಿತ್ರರಿಗೆ ಹೀಗೆ ಯೋಚಿಸಿ ಸಮಾಧಾನಹೊಂದುವ ತಾಳ್ಮೆ ಅವರಿಗೇಕೆ ಬರುವುದಿಲ್ಲವೋ ನಾನರಿಯೆ ! ಶ್ರೀಮತಿ ಬ್ರೇನರು ನನ್ನ ವರ್ತನೆಯನ್ನು ಅಪಾರ್ಥಮಾಡಿಕೊಂಡು, ಕಾರಣವಿಲ್ಲದ ಸಂಶಯಗಳನ್ನು ತಾಳಿರುವರು. ಅವರಲ್ಲಿ ದಿನವೂ ನಾನು ರಾತ್ರಿ ಊಟಮಾಡುವದು ರೂಢಿ. ಅವರ ಕೋರಿಕೆಯಂತೆ ನಾನವರಲ್ಲಿಗೆ ದಿನವೂ ರಾತ್ರಿ ಊಟಮಾಡಿ ಕೂಡಲೇ ಮನೆಗೆ ಬರುತ್ತಿದ್ದೆ. ಹರಟೆಕೊಚ್ಚುವುದು ನನಗೆ ಬೇಡಾಗಿತ್ತು. ಆದರೆ ಇದು

ಅವರಿಗೆ ಸಾಕಾಣಿಸಲಿಲ್ಲನೆಂದೆನಿಸುತ್ತದೆ. ಕಳೆದ ಅಕ್ಟೋಬರದಿಂದ ನಾನು ಮನೆಯವರನ್ನು ಒಂದಸಲವಾದರೂ ಕಂಡಿಲ್ಲ; ಪತ್ರಗಳನ್ನು ಬರೆಯಲು ಬಿಡುವು ದೊರೆಯುಲಿಲ್ಲ. ಮತ್ತೆ ಕೆಲವು ದಿನಗಳ ನಂತರ ಶ್ರೀಮತಿ ಕಾಮಾನ ವಿಲೇಯುವರಲ್ಲಿಗೆ ಹೋಗುವೆನು. ಅವರ ಕೋಪ ಶಮನವಾಗುವಂತೆ ವರ್ತಿಸುವೆನು ಸರಿ ತಾನೆ ?

ನಿಮ್ಮ ಆಪ್ತ— **ಗಾಯ್**

– ೧೫ –

[ಫ್ಲಾಬೇರನು ಕ್ರೊಸಿಯೋದಲ್ಲಿ ನದಿ ದಂಡೆಯ ಮೇಲೆ ಬೆಲೆಗೆ ತೆಗೆದುಕೊಂಡ ವಿಶ್ರಾಂತಿ ಗೃಹಕ್ಕೆ ಒಮ್ಮೊಮ್ಮೆ ಮೋಪಾಸಾ ಹೋಗುವದು ಪರಿಪಾಠವಾಗಿತ್ತು. ಹೀಗೆ ೧೮೮೦ ರ ಮೇ ತಿಂಗಳಲ್ಲಿ ಹೋಗಿಬಂದ. ಆದರೆ ಅದೇ ತಿಂಗಳು ೨೫ ನೇ ದಿನಾಂಕ ಫ್ಲಾಬೇರನು ಮರಣ ಹೊಂದಿದ ಸನ್ನಿವೇಶದ ವಿವರಗಳನ್ನು ಇವರೀರ್ವರ ಗೆಳೆಯನೂ ಅಭಿಮಾನಿಯೂ ಸಾಹಿತ್ಯೋಪಾಸಕನೂ ಆದ ಟರ್ಗನೋವ್‌ನಿಗೆ ಮತ್ತು ಇನ್ನಿತರ ಮಿತ್ರರುಗಳಿಗೆ ಮೋಪಾಸಾ ಬರೆದ ಪತ್ರ.]

**ಪ್ರಿಯ ಟರ್ಗನೋವರೇ,**

ನನ್ನ ಪ್ರಿಯಗುರುವಿನ ಅಗಲುವಿಕೆಯ ದುಃಖವಿನ್ನೂ ನನ್ನನ್ನು ಆವರಿಸಿದೆ. ಅವನ ಹರ್ಷಮಯ ಮುಖ, ನನ್ನೆದುರು ಪ್ರತಿಕ್ಷಣದಲ್ಲಿಯೂ ಒಂದು ನಿಲ್ಲುತ್ತದೆ. ಅವನ ಮಾತಿನ ದನಿ ಇನ್ನಿಸೇ ಕೇಳಿಸುತ್ತಿರುವಂತಿದೆ. ಅವನು ನನ್ನೊಂದಿಗೆ ಆಡಿದ ಪ್ರತಿಯೊಂದು ವಾಕ್ಯವೂ, ಶಬ್ದವೂ ನನ್ನ ಕಿವಿಯಲ್ಲಿ ಕೊರೆದು ನಿಂತಂತಿದೆ. ಅವನಿಲ್ಲದಿರುವದು–ಆಶೂನ್ಯ–ನನಗೆ ಜಗತ್ತೇ ಶೂನ್ಯವಾದಂತಿದೆ. ಅಂದು ಶನಿವಾರ; ಮೇ ಎಂಟನೇ ದಿನಾಂಕ. ಅದು ಅಪವಿತ್ರವಾದ ಸುದ್ದಿಯನ್ನು ತರುವ ಅನಿಷ್ಟದ ದಿನವಾಗುವದೆಂದು ನಾನು ಭಾವಿಸಲಿಲ್ಲ. ಮದಾಮ್ ಕಾಮನ್ ಎಲ್ಲೇಯುವರಿಂದ ನನಗೊಂದು ತಾರು ಬಂತು. "ಫ್ಲಾಬೇರನಿಗೆ ಮಲಬೋಗ: ಅವನು ಬದುಕಲಾರ. ಸಂಜೆ ಆರಕ್ಕೆ ನನ್ನನ್ನು ರೋವೆನ್‌ಕ್ಕೆ ಹೋಡುವ ರೈಲು ನಿಲ್ದಾಣದಲ್ಲಿ ಕಾಣು" ಎಂದು ಕಾಣಿಸಿತ್ತು. ಅವಸರದಿಂದ ಕಛೇರಿಯ ಕೆಲಸವನ್ನು ಮುಗಿಸಿಕೊಂಡು

ನನ್ನ ಮನೆಗೆ ಹೋದೆ. ಅಲ್ಲಿ ನನ್ನ ಗುರುವಿನ ಮಹಾ ವಾರ್ತೆಯನ್ನು ತಿಳಿಸುವ ಎರಡು ತಾರುಗಳು ನನ್ನನ್ನು ಅಧೀರನನ್ನಾಗಿ ಮಾಡಿದವು. ಶ್ರೀಮತಿ ಕಾಮನ್ ವಿಲ್ಲೇಯವರೊಂದಿಗೆ ಆತನ ವಿಶ್ರಾಂತಿ ಸ್ಥಾನವಾದ ಕ್ರೋಸಿಯೋಕ್ಕೆ ಪ್ರಯಾಣ ಬೆಳೆಸಿದೆ. ದುಃಖದಲ್ಲಿ ಹೌಹಾರಿದ ನನ್ನ ಭೀತಿಗೊಂಡ ಮನಸ್ಸಿಗೆ ಅಂದಿನ ಕತ್ತಲರಾತ್ರಿ ಬಹು ಭೀಕರವಾಗಿ ಕಂಡುಬಂತು. ತನ್ನ ಮಲಗುವ ಕೋಣೆಯಲ್ಲಿ ಅಮರ ನಿದ್ರೆಯಲ್ಲಿದ್ದ ಫ್ಲಾಬೇರ್‌ನ ಕಳೇಬರವು ನನ್ನಲ್ಲಿ ಯಾವ ಭೀತಿಯನ್ನು ಉಂಟುಮಾಡಲಿಲ್ಲ. ಅವನ ಮುಖದಲ್ಲಿ ಶಾಂತತೆಯ ಛಾಯೆಯಿತ್ತು. ಕೆಳಕುತ್ತಿಗೆ ಮಾತ್ರ ಉಬ್ಬಿಕೊಂಡಿತ್ತದಲ್ಲದೆ ಮುಖ ಸ್ವಲ್ಪ ಕಪ್ಪಿಟ್ಟುಕೊಂಡಿತ್ತು.

“ಆತನ ದಾದಿಯಿಂದ ಅವನ ಸಾವಿನ ವಿವರಗಳು ನನಗೆ ತಿಳಿದು ಬಂದವು. ಅವನ ಆ ಕೊನೆಯ ದಿನದಲ್ಲಿ ಆತನ ಹತ್ತಿರ ಇದ್ದು ನೆರವಾಗುವ ಆ ಸೇವಾಫಲ ನನಗೆ ದೊರೆಯಲಿಲ್ಲವೆಂದು ವ್ಯಥೆಯಾಗುತ್ತದೆ. ವಿಧಿವಿಲಾಸ? ಮಾಡುವದೇನು ? ಶನಿವಾರವೆಲ್ಲವೂ ಸಂತೋಷದಿಂದ ಕಾಲಕಳೆದನಂತೆ. ಕೈಯಲ್ಲಿದ್ದ ಕಾದಂಬರಿ ಬರೆಯುವ ಕೆಲಸ ಮುಗಿದುದರಿಂದ ಮಾರನೆಯದಿನ ರವಿವಾರ ಪ್ಯಾರಿಸ್ ನಗರಕ್ಕೆ ಹೊರಡುವ ಎಲ್ಲ ಸಿದ್ಧತೆ ಆಗಿತ್ತಂತೆ. ತಾನು ಹೆಚ್ಚಿನ ಉತ್ಸಾಹ ಮತ್ತು ಅಮಿತ ಅಕ್ಕರೆಯಿಂದ ಬರೆದು ಮುಗಿಸಿದ ಆ ಕಾದಂಬರಿಯ ಪ್ರಕಟನೆಯಿಂದ ತನಗೆ ಹೆಚ್ಚು ಹಣ ದೊರೆಯುವುದೆಂಬ ಆಶೆಯಿಂದ” ಇಷ್ಟುದಿನ ಭದ್ರಪಡಿಸಿ ಕಾದಿಟ್ಟ ಈ ತತ್ತಿಯು ನನಗೆ ಒಳ್ಳೆಯ ಮರಿಗಳನ್ನು ತಂದು ಕೊಡುವದೆಂದು “ ಕಾವ್ಯ ಭಾಷೆಯಲ್ಲಿ ವ್ಯಕ್ತಗೊಳಿಸಿದನಂತೆ. ಶುಕ್ರವಾರದ ದಿನ ಸುಖಭೋಜನಮಾಡಿ ತನಗೆ ಪ್ರಿಯವಾದ ಕಾವ್ಯವಾಚನ ಮುಗಿಸಿ, ಮತ್ತೆ ಸಂಜೆ ಡಾಕ್ಟರ್ ಪೋಚಿನ ರೊಂದಿಗೆ ಕಾವ್ಯವಾಚನ ಮಾಡಿ ಬಹು ಸಂತೋಷದಿಂದ ಮಲಗಿ, ಮಾರನೆಯದಿನ ಕೊಂಚ ತಡವಾಗಿ ಎದ್ದು ಸ್ನಾನಮುಗಿಸಿದನಂತೆ. ಅಲಂಕಾರ ಮುಗಿದನಂತರ ತನಗೆ ಬಂದ ಟಪಾಲು ನೋಡಿ, ಏತಕ್ಕೋ ಬೇಸರವೆನಿಸಲು, ದಾದಿಯನ್ನು ಕರೆದನಂತೆ. ಅವಳು ಬರುವದು ತಡವಾಗಲು ಕಿಟಕಿಯ ಹತ್ತಿರಹೋಗಿ ಕೂಗಿ ಕರೆದನಂತೆ. ದಾದಿಯು ಡಾಕ್ಟರನು ಊರಲ್ಲಿಲ್ಲವೆಂದು ಹೇಳಲು ಅವನ

ಕೋಣೆಗೆ ಬಂದು, ದಂಗುಬಡಿದನಿಂತಂತೆ ಕಂಗುಬಂದ ಫ್ಲಾಬೇರನನ್ನು
ಕಂಡು ಸುಮ್ಮನಿರಲು ಆತನು "ನನಗೆ ತಲೆ ತಿರುಗುತ್ತದೆ. ಸ್ಮೃತಿ ತಪ್ಪ
ಬಹುದೆಂದು ನೆನೆಯುತ್ತೇನೆ. ಈ ರೋಗ ಇಂದೇ ಕಾಣಿಸಿಕೊಂಡಿತು.
ಅಲ್ಲದೆ ನಾಳೆ ರೈಲಿನಲ್ಲಿ ನಾನೊಬ್ಬನೇ ಇದ್ದಾಗ ಈ ಕಷ್ಟಬಂದಿದ್ದರೆ.... ಇರಲಿ"
ಎಂದು ಟೇಬಲದ ಅರೆಯಲ್ಲಿದ್ದ ಯುಡಿಕೊಲೋನ್ ಸೀಸೆಯನ್ನು ತೆಗೆದು
ಅದರಲ್ಲಿಯ ದ್ರಾವಕವನ್ನು ತಲೆಯ ಮೇಲೆ ಕೊಂಚ ಹಾಕಿಕೊಂಡು ಸವರಿ
ಕೊಳ್ಳುತ್ತ ಆರಾಮ ಕುರ್ಚಿಯಲ್ಲಿ ಒರಗಿದನಂತೆ. ಮುಂದೆ ರೋವೆನ್.....
ಅಮ........ಬ....ಹು........ದೂರ....ಎಳ....ಹೆಲೆಟ್....ಹೆಲೆಟ್ಸ್..........ಅ
ವರು....ನ....ನ್ನ....ಪ....ರಿ....ಚ....ಯಸ್ಥ....ರು." ಎಂದು ಹೇಳುತ್ತಿರು
ವಾಗ ಅವನ ತಲೆ ಪಕ್ಕಕ್ಕೆ ತಿರುಗಿ, ಕೈಗಳೆರಡು ಮುದುಡಿಕೊಂಡವಂತೆ. ತನ್ನ
ನ್ನು ಬಹುಬೇಗ ಆವರಿಸಿಕೊಂಡ ಸಾವಿನಬರುವಿಕೆ ಅವನ ಹೃದಯದಲ್ಲಿ
ಉಂಟುಮಾಡಿದ ವೇದನೆಯ ಕುರುಹೇ ಅದುಯೆಂದು ನನ್ನ ಭಾವನೆ. ಇದು
ಅವನ ಸಾವಿನ ಚಿತ್ರ."

"ಅಲ್ಲಿ ಮೂರು ದಿನಗಳವರೆಗೆ ನಾನಿದ್ದು ಅವನ ಅಂತ್ಯಕ್ರಿಯೆಗಳನ್ನು
ನಿರ್ವಹಿಸಿದೆ. ಜಾರ್ಜ ಪೂಚೋ ಮತ್ತು ಡಾಕ್ಟರ್ ಪೋರಿನ್‌ರ ನೆರವು
ದೊರೆಯಿತು. ಮಂಗಳವಾರ ಮುಂಜಾನೆ ಆತನ ಕಳೇಬರವನ್ನು ಸ್ಮಶಾನಕ್ಕೆ
ಸಾಗಿಸಿದೆವು. ಎತ್ತರವಾದ ಪ್ರದೇಶದಿಂದ ಅವನ ಪ್ರೀತಿಯ ಕ್ರೋಸಿಯೋದ
ಲ್ಲಿಯ ಮನೆ ಮತ್ತು ಸುತ್ತಿ ಸುತ್ತಿ ಹರಿಯುತ್ತಿದ್ದ ನದಿಯು ಕಾಣುತ್ತಿರುವ
ನೋಟ ಬಹು ಮನೋಹರವಾಗಿತ್ತು.

"ಸುಖದ ದಿನಗಳನ್ನು ಆನಂದದಿಂದ ಕಳೆಯುವನೆಂಬ ಗಾಳಿಗೋಪು
ರದ ಆವನ ಆಶೆ ಹೀಗೆ ಕುಸಿದುಬಿದ್ದುದು ವಿಚಿತ್ರವಲ್ಲವೇ?"

"ಸ್ಮಶಾನಯಾತ್ರೆಗೆ ಪ್ಯಾರಿಸ್ ನಗರದಿಂದ ಅವನ ಅನೇಕ ಸಾಹಿತ್ಯ
ಮಿತ್ರರು ಬಂದಿದ್ದರು. ಹ್ಯೂಗೋ, ರೇವನ್, ಟೋಯಿಸ್, ವ್ಯಾಕ್ವೈಡಿ
ಕಾಂಪ್ರೋ, ಫ್ರೆಡರಿಕ್ ಚಾಡ್ರೇ, ಡ್ಯೂಮಸ್, ಹ್ಯೂಗೋ, ವ್ಯಾಕ್ಯೂರೀ
ಮುಂತಾದವರಲ್ಲ ಯಾರೂ ಬಂದಿರಲಿಲ್ಲ."

"ಮುಂದಿನ ವಿವರಗಳನ್ನು ನಿಮಗೆ ಹಿಂದಿನಿಂದ ಬರೆಯುತ್ತೇನೆ, ಅವನ ಕೊನೆಯ ಕಾದಂಬರಿಯ ಪ್ರ ಕ ಟ ಣೆ ಯ ವಿಚಾರ, ಆಸ್ತಿಯ ಹಕ್ಕುದಾರನಾರೆಂಬುವ ಪ್ರಶ್ನೆ ನಿರ್ಧರವಾದನಂತರ ಕೈಕೊಳ್ಳುವ ಎಲ್ಲದಕ್ಕೂ ನಿಮ್ಮ ನೆರವು ಬೇಕಾಗಿದೆ."

"ರಸಿಯಾದಲ್ಲಿಯ ನಿಮ್ಮ ಪತ್ತೆ (ವಿಳಾಸ) ನನಗೆ ತಿಳಿದಿರಲಿಲ್ಲ. ಆದುದರಿಂದ ನಿಮ್ಮ ಮಿತ್ರಳಾದ ಮಾಡಾಮು ವಿಯರ್ಡೂ ಇವರಿಗೆ ನಾನು ಕೇಳಿಕೊಂಡೆ. ನಿಮ್ಮ ಪರಮ ಸ್ನೇಹಿತನಾದ ಫ್ಲಾಬೇರನ ಸಾವಿನವಾರ್ತೆ ನಿಮಗೆ ಪತ್ರಿಕೆಗಳ ಮೂಲಕ ತಿಳಿಯುವಮುನ್ನ ಮಿತ್ರರಿಂದಲೇ ಆ ಸಮಾಚಾರವು ತಿಳಿಯುವುದು ಒಳಿತೆಂದು ಆ ನಿಮ್ಮ ಮಿತ್ರರಿಗೆ ಸಂದೇಶ ಕಳುಹಿದೆ. ಕ್ಷಮೆ ಇರಲಿ. ಈ ವಿಷಾದ ಸನ್ನಿವೇಶದ ವಿವರಗಳಿಂದಲೇ ನಿಮ್ಮ ಅಪ್ಪಣೆ ತೆಗೆದುಕೊಳ್ಳುತ್ತೇನೆ. ನಮಸ್ಕಾರ. ನೀವು ಆದಷ್ಟು ಬೇಗ ಬಂದು ಹೋಗುವಿರೆಂದು ನಂಬಿದ್ದೇನೆ.

—ತಮ್ಮ ಗಾಯ್. ಡಿ. ಮೋಪಾಸಾ.

— ೧೬ —

[ಫ್ಲಾಬೇರನ ಮರಣದಿಂದ ಮೋಪಾಸಾನ ಮೇಲಾದ ಪರಿಣಾಮವೇನೆಂಬುವುದು ಗಾಯನೇ ತನ್ನ ನಾದಿನಿಗೆ ಬರೆದ ಈ ಪತ್ರದಿಂದ ತಿಳಿಯುವದು.]

**ಪ್ರಿಯ ನಾದಿನಿಯೇ,**

ಗುರು ಫ್ಲಾಬೇರನ ನೆನಪು ದಿನವೂ ಆಗುತ್ತಿವೆ. ಎಲ್ಲೆಲ್ಲಿಯೂ ಅವನ ಮುಖವೇ ಕಂಡುಬರುತ್ತಿದೆ. ಆತನು ನನ್ನೆದುರು ನಿಂತಂತಿದೆ. ನೀಳವಾದ ನಿಲುವಂಗಿಯನ್ನು ಧರಿಸಿ ತನ್ನ ಉದ್ದವಾದ ಕೈಗಳಿಂದ ಸನ್ನೆ ಮಾಡುವಂತಿದೆ. ಈಗ ನನ್ನಲ್ಲಿ ಅಶಾಂತತೆ ತಲೆದೋರಿದೆ. ನನಗಾವುದರಲ್ಲಿಯೂ ಉತ್ಸಾಹವೇ ಇಲ್ಲ. ಎಲ್ಲಿ ನೋಡಿದರೂ ನಿರಾಶೆಯ ಚಿನ್ಹೆಯೇ. "ಬ ರಿ ದೋ ಬಂದು. ತೆರವೋ ತೆರವು" ಎಂದಾಗಿದೆ ನನ್ನ ಬಾಳು. ದುಃಖಮಯವಾದ ಈ ಏಕಾಂತದ ನೋವು ದಿನಗಳುರುಳಿದಂತೆ ಮರೆಯುವುವೆಂದು ಹೇಳುವರು.

ಆದರೆ ನನ್ನ ಅನುಭವ ತೀರ ಬೇರೆಯಾಗಿದೆ. ಆ ನನ್ನ ಗುರುವಿನ ಸಾವು ನನ್ನ ಹೃದಯವನ್ನು ಕಲಕಿದೆ. ನನ್ನ ದೇಹವನ್ನು ಛಿದ್ರಗೊಳಿಸಿದೆ. ಹೌಹಾರಿ ನಿಂತ ನನಗೆಂದು ಧೈರ್ಯ ಬರುವದೋ ಕಾಣೆ. ಆ ನೋವು ಮಾಯಲಾರದು. ಆ ಕೊರತೆ ಇನ್ನುಮುಂದೆ ತುಂಬಲಾರದು.

ನಿನ್ನ **ಗಾಯ್. ಡಿ. ಮೋಪಾಸಾ.**

– ೧೭ –

[ಇದೇ ಸಮಯವಲ್ಲಿ ಫ್ಲಾಬೇರನ ಮರಣದಿಂದ ತನ್ನ ತಾಯಿಗೆ ಆದ ದುಃಖವನ್ನು ಮದಾಮ್ ಕಾಮುನ್ ವಿಲ್ಲೇಯುವರಿಗೆ ಗಾಯನು ಬರೆದ ಪತ್ರ.]

"ನನ್ನ ಪ್ರೀತಿಯ ತಾಯಿಗೆ ಆದ ನೋವು ಎಂತು ವರ್ಣಿಸಲಿ? ಇದು ಕೊನೆಯಿಲ್ಲದ ದುಃಖವನ್ನು ತಂದೊಡ್ಡಿದೆ. ಎರಡು ದಿನಗಳವರೆಗೆ ಅವಳು ಕೋಣೆಯಲ್ಲಿ ಬಾಗಿಲುಹಾಕಿಕೊಂಡು ಒಂದೇಸವನೆ ಅಳುತ್ತಿದ್ದಳಂತೆ. ಅವನ ಕವನಗಳನ್ನು ಹಾಡಿ ಕಾದಂಬರಿಗಳನ್ನು ಓದಿ ಶಾಂತಿ ಪಡೆಯುತ್ತಲಿದ್ದ ಆ ನನ್ನ ಸಾಧ್ವಿ ಶಿರೋಮಣಿಗೆ ಇನ್ನೆಲ್ಲಿಯ ಶಾಂತಿ? ತನ್ನೆಲ್ಲವನ್ನೂ ನನಗಾಗಿ ಅರ್ಪಿಸಿ ಮುಳುಗುತ್ತಿದ್ದ ನಮ್ಮ ಜೀವನ ನೌಕೆಯನ್ನು ಹಿಡಿದೆತ್ತಿ ನೆರವಿಗೆಂದು ನಿಂತು, ನಂದುತ್ತಿದ್ದ ನಮ್ಮ ಮನೆಯ ಬೆಳಕನ್ನು ಬೆಳಗಿಸಿದ ಅವನ ಅಗಲಿಕೆ ಅವಳೆಂತು ಮರೆಯುವಳು? ಕೊನೆಯ ವರೆಗೂ ಆ ನನ್ನ ತಾಯಿಯ ಜೀವನ ದುಃಖಮಯವಾಗಿಯೇ ಉಳಿಯುವದೋ ಏನೋ?.

ನಿಮ್ಮ **ಗಾಯ್. ಡಿ. ಮೋಪಾಸಾ.**

ಗುರು ಫ್ಲಾಬೇರನ ಸಾವು ಗಾಯನ ಜೀವನದಲ್ಲಿ ತುಂಬಿಬಾರದ ತೆರವನ್ನು ಕಲ್ಪಿಸಿತು. ಆದರೆ ಅವನಲ್ಲಿ ಹೊಸದೊಂದು ಹುಮ್ಮಸ, ಸ್ಫೂರ್ತಿ, ನೆಲೆಗೊಂಡಿತು. ಜೀವನದಲ್ಲಿ ಸಾಧಿಸಬೇಕಾದುದನ್ನು ಮಾನವನು ತಡಮಾಡಬಾರದು. ನಿಷ್ಠೆಯಿಂದ ಮುಂದರಿದರೆ ಗೆಲವು ನಿಶ್ಚಿತವೆಂದು ಬಗೆದು ಗಾಯನು ತನ್ನ ಸಾಹಿತ್ಯ ಬರವಣಿಗೆಯನ್ನು ಭರದಿಂದ ಸಾಗಿಸಿದ. ಇವನ ಜೀವನದಲ್ಲಿ ಈ ಸಾವು ಅತ್ಯಂತ ಮಹತ್ವದ ವಿಷಯವಾಗಿ ಉಳಿಯಿತು.

---

# ಮೋಪಾಸಾ ತನ್ನ ಸಾಹಿತ್ಯ ಮಿತ್ರರಿಗೆ ಬರೆದ ಓಲೆಗಳು

– ೧೮ –

[ ಗುರು ಫ್ಲಾಬೇರನ ಸಾವಿನ ಚಿತ್ರದ ವಿವರ ಮತ್ತು ಅದರ ಪರಿಣಾಮ ಗಾಯ್‌ನ, ಮತ್ತು ಇತರ ಮಿತ್ರರ ಮೇರೆ ಹೇಗಾಯಿತೆಂಬುದನ್ನು ಓದುಗರು ಈಗಾಗಲೇ ತಿಳಿದಿರಬಹುದು. ಗಾಯ್‌ನ ಸಾಹಿತ್ಯ ಜೀವನವನ್ನು ರೂಪಿಸಿದವರಲ್ಲಿ ಫ್ಲಾಬೇರನೇ ಮುಖ್ಯನು. ಸರಕಾರದ ಉದ್ಯೋಗವನ್ನು ತ್ಯಜಿಸಿ ಸಾಹಿತ್ಯ ಕ್ಷೇತ್ರದಲ್ಲಿ ಸಂಪೂರ್ಣವಾಗಿ, ನೆಲೆಸಲು ಸ್ಫೂರ್ತಿದೊರೆತಿದುದು ಇವನ ಮರಣ ಸಂದೇಶವೆಂದೇ ಹೇಳಬಹುದು. ಈ ಅಮರ ಸಂದೇಶದ ನಂತರ ಇವನ ಜೀವನ ಸ್ಫೂರ್ತಿಗೊಂಡು ಇವನ ಲೇಖನಿ ಅತ್ಯಂತ ವೇಗವಾಗಿ ಓಡತೊಡಗಿತು. ೧೮೮೧ ರಿಂದ ೧೮೯೧ ರಲ್ಲಿ ಇವನಿಂದ ಅಗಣಿತವಾದ ಸಾಹಿತ್ಯ ನಿರ್ಮಾಣವಾಯಿತು. ಇವನ ಇತರ ಸಾಹಿತ್ಯ ಮಿತ್ರರ ಪರಿಚಯವನ್ನು ವಿವರಿಸುವ ಪತ್ರಗಳನ್ನು ಸಂದರ್ಭ ಸೂಚನೆಯೊಂದಿಗೆ ಈ ಕೆಳಗೆ ಪ್ರಕಟಿಸಲಾಗಿದೆ.

[ ಪ್ರತಿ ಆದಿತ್ಯವಾರವೂ ೧೮೭೫-೭೬ ರಲ್ಲಿ ಗಾಯ್-ದ-ಮೋಪಾಸಾನು ತನ್ನ ಗುರುವಾದ ಫ್ಲಾಬೇರನ ಕೋಣೆಗೆ ಸಾಹಿತ್ಯ ಸಭೆಗೆ ಹೋಗುತ್ತಿದ್ದ. ಮಧ್ಯಾಹ್ನದ ಊಟವೂ ಅಲ್ಲಿಯೇ ಆಗುತ್ತಿತ್ತು. ಈ ಸಭೆಗಳಿಗೆ ಈತನ ಜೀವನದಲ್ಲಿ ಅತಿ ಮಹತ್ವದ ಸ್ಥಾನವಿದೆ. ಇದರ ಬಗ್ಗೆ ಅವನೇ ಬರೆದ ಪತ್ರದ ವಿವರ ಇದು. )

**ಮಮತೆಯ ತಾಯೆ,**

ಫ್ಲಾಬೇರರು ನನ್ನಲ್ಲಿ ಹೆಚ್ಚು ಆಸಕ್ತಿ ಮತ್ತು ವಿಶ್ವಾಸವನ್ನು ತೋರುತ್ತಿರುವರು. ಮಧ್ಯಾಹ್ನದ ಊಟದ ಸಮಯದಲ್ಲಿ ನಾನು ಆ ಏಳು ದಿನಗಳಲ್ಲಿ ಬರೆದುದನ್ನು ತೋರಿಸಿ, ಚರ್ಚಿಸುತ್ತಿದ್ದೆ. ಅವರು ನನ್ನನ್ನು ಅನೇಕ ರೀತಿಯಲ್ಲಿ ಪ್ರೋತ್ಸಾಹಿಸುತ್ತ ಬಂದಿರುವರು. ಆ ಸಮಯಗಳಲ್ಲಿ ಅವರು ನುಡಿದ ಮಾತು ಇದು. “ ನಿನ್ನಲ್ಲಿ ಉತ್ತಮ ಬರಹಗಾರನ ಲಕ್ಷಣಗಳಿವೆ; ನೀನು ಜಾಣನು. ಆದರೆ ನಿನ್ನ ಜಾಣತನವನ್ನು ಸರಿಯಾಗಿ ಉಪಯೋಗಿಸಿಕೊಳ್ಳುವ ಶಕ್ತಿ ನಿನ್ನಲ್ಲಿದೆಯೋ ಇಲ್ಲವೋ ನಾನು ಹೇಳಲಾರೆ. ‘ಬಫ್ಫನ್’ ಎಂಬ ಹೆಸರಾಂತ ಸಾಹಿತಿಯು ಹೇಳುವಂತೆ ನಿರೂಪಣಾ ಶಕ್ತಿ ಬರಹಗಾರ

ನಲ್ಲಿ ಬೇಗ ನೆಲೆಗೊಳ್ಳುವದಿಲ್ಲ. ಸಾಧನೆಯಿಂದಲೇ ಆ ಶಕ್ತಿ ಕೈಗೂಡುವದು.” ನೀನು ಅವಸರ ಮಾಡಬಾರದು. ಎಂಬ ಈ ಸುವರ್ಣಪ್ರಾಯದ ನುಡಿಗಳು ನನಗೆ ಕೈದೀವಿಗೆಯಾಗಿವೆ. ಅವರೇ ನನ್ನ ಮಾರ್ಗದರ್ಶಕರೆಂದು ನಂಬಿರುವೆನು. ಅವರ ಮಾತುಗಳನ್ನು ನಂಬುವೆನು. ನನ್ನ ವಿದ್ಯೆಯಲ್ಲಿ ಅವರ ಕೈವಾಡವೇ ಹೆಚ್ಚು. ನನ್ನನ್ನು ಬಹಿರಂಗವಾಗಿ ಅವರು ಶಿಷ್ಯನೆಂದು ಕರೆದು ನನಗೆ ಮನ್ನಣೆಯನ್ನಿತ್ತಿರುವರು. ೧೮೭೫ ರಿಂದ ನಾನು ಬರೆಯುತ್ತಿರುವ ಕೃತಿಗಳನ್ನು ತಿದ್ದಿ, ತೀಡಿ ಸರಿಪಡಿಸಿ, ನನ್ನನ್ನು ದಾರಿಗೆ ಹಚ್ಚುತ್ತಿರುವರು. ನನ್ನ ಕವನಗಳನ್ನು, ಕತೆಗಳನ್ನು, ನೀಳ್ಗತೆಗಳನ್ನು ಓದಿ ಸಲಹೆಗಳನ್ನು ನೀಡುತ್ತಿರುವರು. ಏಳು ವರ್ಷದ ವರೆಗೆ ನನ್ನ ಮತ್ತು ಅವರ ಈ ಕೂಡಿದ ಬಾಳಿನಲ್ಲಿ ನನಗೆ ಮಾರ್ಗದರ್ಶಕರಾಗಿರುವರು. “ಬರಹಗಾರನಿಗೆ ಸ್ವಯಂ ಸ್ಫೂರ್ತಿಯ ಶಕ್ತಿ ಇರಬೇಕು. ಅವನು ಅದನ್ನು ಸ್ವತಂತ್ರ ರೀತಿಯಲ್ಲಿ ತನ್ನ ಕಲ್ಪನಾ ಚಾತುರ್ಯದಿಂದ ಹೊರಹಾಕಬೇಕು. ಒಂದು ವೇಳೆ ಆ ಸ್ಫೂರ್ತಿ ಇಲ್ಲದಿದ್ದಲ್ಲಿ ಅದನ್ನು ಪಡೆಯುವ ಪ್ರಯತ್ನ ಮಾಡಬೇಕು; ಮೇಧಾಶಕ್ತಿಯನ್ನು ಪ್ರಯತ್ನದಿಂದ ಅಳವಡಿಸಿಕೊಳ್ಳಬಹುದು. ಕಾಲಕ್ರಮೇಣ ಕಲಾವಿದನಲ್ಲಿರುವ ಆ ವಿಶೇಷ ಶಕ್ತಿ ತನ್ನ ನಿಜರೂಪದಲ್ಲಿ ಹೊರಬೀಳುವದು. ಇದನ್ನು ಪಡೆಯಲು ನೀನು ಕೊಂಚಕಾಲ ತಡೆಯಬೇಕು. ಅವಸರದಿಂದ ಪ್ರಯೋಜನವಿಲ್ಲ’’ ಎಂದು ಹೇಳಿದ ಅವರ ಉಪದೇಶದ ಮಾತು ನನಗೆ ಸದಾ ನೆನಪಿನಲ್ಲಿದೆ.

ಮತ್ತೆ ಅವರು ‘‘ಮಾನವನು ಪೂರ್ಣವಾಗಿ ಎಲ್ಲವನ್ನೂ ತಿಳಿದಿರುವನೆಂದು ಭಾವಿಸುವದು ತಪ್ಪು. ಯೋಚಿಸಿದಂತೆಲ್ಲ, ನೋಡಿದಂತೆಲ್ಲ, ಪರೀಕ್ಷಿಸಿದಂತೆಲ್ಲ ಹೊಸ ವಿಚಾರಗಳು ತಲೆದೋರುವವು. ಮೊದಲಬಾರಿಗೆ ಸಾಮಾನ್ಯವೆನಿಸಿದ್ದು ಸಮಸ್ಯೆಯಾಗಿ ಪರಿಣಮಿಸಬಹುದು. ಅದನ್ನು ಪರಿಶ್ರಮದಿಂದ ಅದರ ಮಹತ್ವದ ವಿಷಯದ ಅರಿವು ನಮಗಾಗಬಹುದು. ಮೊದಲ ಸಲ ನಾವು ಒಂದನ್ನು ನೋಡುವಾಗ ಸಾಮಾನ್ಯ ದೃಷ್ಟಿಯಿಂದಲೇ ನೋಡುವೆವು. ಕ್ರಮೇಣ ಅದನ್ನು ಮತ್ತೆ ಮತ್ತೆ ನೋಡಿದಾಗ ಮೊದಲಿಗೆ ತಿಳಿಯದಂತಹ ವಿಷಯಗಳು ತಿಳಿಯುವವು. ಸರ್ವಸಾಮಾನ್ಯವಾದ ವಿಷಯದಲ್ಲಿಯೂ

ನಮಗೆ ತಿಳಿಯದಂತಹ ಗೂಢ ಸಂದೇಶವಿರಬಹುದು. ಅದೇನೆಂಬುದನ್ನು ತಿಳಿಯಬೇಕೆಂಬ ಹಂಬಲ ಕಲಾವಿದನಿಗಿರಬೇಕು. ಬಯಲು ಸೀಮೆಯಲ್ಲಿರುವ ಸುಂದರ ಮರವನ್ನು, ಉರಿಯುವ ಬೆಂಕಿಯನ್ನು, ವರ್ಣಿಸಲು ನಾವು ಅದನ್ನು ಕಣ್ಣಾರೆ ಕಂಡರಷ್ಟೇ ಸಾಧ್ಯ. ಇಲ್ಲವಾದರೆ ನಮ್ಮ ವರ್ಣನೆಯಲ್ಲಿ ಕೃತ್ರಿಮತೆ ತಲೆದೋರುವದು. ಹೀಗೆ ಸಾಧನೆಯಿಂದ ಒಂದು ಕಾರ್ಯದಲ್ಲಿ ಜಯಶೀಲರಾಗುವುದನ್ನೇ ಕಲಾವಿದನ ಕರ್ತೃತ್ವಶಕ್ತಿ, ಇಲ್ಲವೇ ವಿಶೇಷ ಶಕ್ತಿ. ಇಲ್ಲವೆ ಮೇಧಾಶಕ್ತಿಯೆಂದೆನ್ನಬಹುದು. ಸ್ವರೂಪದ ಚಿತ್ರವನ್ನು ಕೊಡುವಾಗ ಒಂದೊಂದು ಚಿತ್ರಕ್ಕೂ ಪ್ರತ್ಯೇಕತೆ ಇರುವದೆಂಬುದನ್ನು ಕಲಾವಿದನ ಸೂಕ್ಷ್ಮ ದೃಷ್ಟಿ ಸಾರುವದು ಎಂದು ಹೇಳಿ ಮುಂದೆ ಆ ನನ್ನ ಗುರುಗಳಾದ ಫ್ಲಾಬೇರರು ಆದುದರಿಂದ ಕಲಾವಿದನಾದ ನೀನು ಚಿತ್ರಗಳನ್ನು ಚಿತ್ರಿಸುವಾಗ ಬರಹಗಾರನಾದ ನೀನು ಕತೆಗಳಲ್ಲಿಯ ವ್ಯಕ್ತಿಗಳ ಬಗ್ಗೆ ಬರೆಯುವಾಗ ಅಂತಹ ಜನರನ್ನು ಸಮಕ್ಷಮ ಕಾಣಬೇಕು. ಅವರ ಜೀವನ ಕ್ರಮವನ್ನು ತಿಳಿಯಬೇಕು. ನಿನ್ನ ಕತೆಗಳಲ್ಲಿ ಬರುವ ವಿವಿಧ ವ್ಯಕ್ತಿಗಳ ಬಗೆಬಗೆಯ ಹಾವಭಾವಗಳನ್ನು ಚಿತ್ರಿಸುವಾಗ ಅವರ ಜೀವನದ ಕಷ್ಟನಷ್ಟಗಳ ವಿವರವನ್ನು ರೂಪಿಸುವಾಗ, ಅವರ ನಡುವೆ ನೀನು ನಿಂತು ತಿಳಿಯಬೇಕು. ನೀನು ಹೇಳಬೇಕೆಂಬುದನ್ನು ಸ್ಪಷ್ಟವಾಗಿ ಹೇಳಬೇಕು. ಉಪಯೋಗಿಸಬೇಕಾದ ಸರಿಯಾದ ಮಾತನ್ನೇ ಅಲ್ಲಿ ಜೋಡಿಸಬೇಕು. ವರ್ಣನೆಗಳಲ್ಲಿ ತೂಕವಿರಬೇಕು; ಅಳತೆ ಮೀರಿದ ಮಾತುಗಳು, ವಿವಿಧಾರ್ಥಗಳನ್ನು ಕೊಡುವ ಶಬ್ದಗಳು ಇರಬಾರದು. ಬರಹಗಾರನು ಅತಿಶಯೋಕ್ತಿಯಲ್ಲಿ ಮಗ್ನನಾಗುವದು ವಾಸ್ತವಿಕತೆಗೆ ಕುಂದು ತರುವುದು ಬರಹಗಾರನ ಹೊಣೆ ಹೆಚ್ಚಿನದು. ಅವನ ಬರವಣಿಗೆ ನಾಡನ್ನು ತಿದ್ದುವಂತಹದಾಗಿರಬೇಕು. ನೀನು ಬರೆಯಬೇಕೆಂಬುದನ್ನು ಬಿಚ್ಚು ಮಾತಿನಲ್ಲಿ ರೂಪಿಸು. ನಿನ್ನ ಶೈಲಿಯು ಸರಳವಾಗಿರಬೇಕು." ಹೀಗೆ ಫ್ಲಾಬೇರರು ನನ್ನನ್ನು ಎಚ್ಚರಿಸಿ ನನಗೆ ಕೀರ್ತಿ ಬರಲು ಕಾರಣರಾಗಿರುವರು. ಈ ಗುರುವಿನ ನೆರವನ್ನು ನಾನೆಂದಿಗೂ ಮರೆಯಲಾರೆ. ಇವರ ಈ ಉಪದೇಶ ನನ್ನ ಸಾಹಿತ್ಯ ಜೀವನಕ್ಕೆ ದಿವ್ಯ ಜ್ಯೋತಿಯಾಗಿದೆ. ಪತ್ರ ದೊಡ್ಡದಾಯಿತು ಕ್ಷಮಿಸು ತಾಯಿ.

ನಿನ್ನವನೇ **ಗಾಯ್**

— ೧೯ —

[ಪ್ರತಿ ಆದಿತ್ಯವಾರವೂ ಫ್ಲಾಬೇರನ ಮನೆಯಲ್ಲಿ ಸೇರುತ್ತಿದ್ದ ಸಾಹಿತಿಗಳ ಸಭೆಯ ವಿವರಗಳನ್ನು ಕುರಿತು ಗಾಯ್-ದ-ಮೋಪಾಸಾನು, ಓರ್ವ ಮಿತ್ರನಿಗೆ ಬರೆದ ಪತ್ರದ ವಿವರ.]

"ಮಿತ್ರನೇ

ಇಂದು ನಿನಗೆ ಹೊಸ ವಿಷಯವನ್ನು ಬರೆಯುವೆ. ನನ್ನ ಸಾಹಿತ್ಯ ಜೀವನಕ್ಕೆ ಸ್ಫೂರ್ತಿಯನ್ನಿತ್ತ ಅಂಶವೆಂದರೆ ಗುರು ಫ್ಲಾಬೇರನ ಮನೆಯಲ್ಲಿ ಪ್ರತಿ ಆದಿತ್ಯವಾರವೂ ಆತನೊಂದಿಗೆ ನಡೆಯುತ್ತಿದ್ದ ಊಟದ ಸಮಯದಲ್ಲಿ ನಡೆಯುತ್ತಿದ್ದ ಸಾಹಿತ್ಯ ಚರ್ಚೆ. ಎರಡು ಗಂಟೆಯಿಂದ ಆತನ ಮಿತ್ರರು ಸಂಜೆ ಏಳರವರೆಗೆ ಬರುತ್ತಿದ್ದರು. ಮಿತ್ರರು ಬಂದಂತೆಲ್ಲ ಅವರೇ ಸ್ವತಃ ಹಸನ್ಮುಖದಿಂದ ಬರಮಾಡಿಕೊಳ್ಳುತ್ತಿದ್ದರು. ಮತ್ತೊಂದು ಮಾತು ನಿನಗೆ ತಿಳಿದಿರುವದು ಅವಶ್ಯ. ಅವರು ಮದುವೆಯಾಗಿರಲಿಲ್ಲ. ಮಾತು ನೆನಪಿನಲ್ಲಿರಲಿ. ಅವರಿಗೆ ಕೋಣೆಯನ್ನು ಹೆಚ್ಚು ಆಡಂಬರದಿಂದ ಅಲಂಕರಿಸುವ ಮನಸ್ಸಿನವರಲ್ಲಿ ಮಿತ್ರರು ಬಂದರೆಂಬ ಕಾಲ್‌ಬೆಲ್ ಸಪ್ಪಳವಾದ ಕೂಡಲೇ ತನ್ನ ಬರೆಯುವ ಟೇಬಲನ್ನು ರೇಸಿಮೆಯ ಅರಿವೆಯಿಂದ ಹೊದಿಸಿ ತಾನೇ ಹೋಗಿ ಬಾಗಿಲನ್ನು ತೆರೆಯುತ್ತಿದ್ದ. ಆದಿತ್ಯವಾರಗಳಲ್ಲಿ ಮನೆಯ ಆಳು ರಜೆಯ ಮೇಲಿರುತ್ತಿದ್ದ.

ಆದಿತ್ಯವಾರಗಳಲ್ಲಿ ಸಹಜವಾಗಿ ಮೊದಲಿಗೆ ಬರುತ್ತಿದ್ದವನೆಂದರೆ ಇವಾನ್ ವರ್ಗನೋವನು. ಆತನನ್ನು ಸೋದರನಂತೆ ಅಪ್ಪಿಕೊಳ್ಳುತ್ತಿದ್ದರು. ಈ ರಷಿಯ ದೇಶದ ಕಾದಂಬರಿಕಾರ ಫ್ಲಾಬೇರನಗಿಂತ ಎತ್ತರವಾದವನು. ಫ್ಲಾಬೇರನೆಂದರೆ ಆತನಿಗೆ ಅಮಿತ ವಿಶ್ವಾಸ, ಗೌರವ, ಮತ್ತು ಪ್ರೇಮ. ಆತ ಮಾತನಾಡುವದು ಮೆಲುದನಿಯಲ್ಲಿ. ಅವಸರದ ಪ್ರಕೃತಿ ಆತನದಾಗಿದ್ದಿಲ್ಲ. ಆದರೆ ಪ್ರತಿಯೊಂದು ಮಾತನ್ನು ತೂಕಮಾಡಿ ಸುಂದರ ಸ್ವರದಲ್ಲಿ ಹೇಳುವ ಜಾಣ್ಮೆ ಅವನದು. ಫ್ಲಾಬೇರನು ಇವನ ಮಾತನ್ನು ಅತಿ ಭಕ್ತಿ ಭಾವದಿಂದ ಕೇಳುತ್ತಿದ್ದನು. ಅವರ ಮಾತು ಕತೆಗಳು ತಾತ್ಕಾಲಿಕ ರಾಜಕೀಯ ವಿಷಯಗಳತ್ತ ಹೊರಳಿದರೂ, ಹೆಚ್ಚು ಚರ್ಚಿಸುತ್ತಿದ್ದುದು ಸಾಹಿ

ತ್ಯದ ವಿಷಯುಗಳನ್ನೇ ವರ್ಗನೋವರು ಸಮಕಾಲಿನ ಪಾಶ್ಚಾತ್ಯ ಬರಹಗಾರರ ಪುಸ್ತಕಗಳನ್ನು ತರುತ್ತಿದ್ದರು. ಗೋವೇ, ಪ್ರಷ್ಟಿನ್ ಮತ್ತು ಸ್ವಿನ್‌ಬರ್ನರ ಪದ್ಯಗಳನ್ನು ಅನುವಾದಿಸಿ ಅವುಗಳನ್ನು ಓದಿ ತೋರಿಸುತ್ತಿದ್ದರು.

ಆನಂತರ ಟೇನ ಬರುವರು. ಇವರದು ಯಾವಾಗಲೂ ಅಂಜಿಕೆಯನ್ನು ಸೂಚಿಸುವ ದೃಷ್ಟಿಯೇ. ಕಪ್ಪು ಕನ್ನಡಕಗಳ ಹಿಂದೆ ಇವರ ದೃಷ್ಟಿ ಎಂತಹ ದೆಂಬದನ್ನೂ ತಿಳಿಯಲು ಅಶಕ್ಯವಾಗಿತ್ತು. ಹಳೆಯ ಕಾಗದ ಪತ್ರಗಳು, ಶಾಸನಗಳು, ಅವಶೇಷಗಳೆಂದರೆ ಇವರಿಗೆ ಹೆಚ್ಚು ಪ್ರೀತಿ. ಅವುಗಳ ಕಟ್ಟನ್ನು ಹಿಡಿದುಕೊಂಡು ಬರುತ್ತಿದ್ದರು. ಆನಂತರ ಫ್ರೆಡರಿಕ್ ಬಾವರೇ ಜಾರ್ಜು ಪೂಥೇ ಕ್ಲಾಡಿಯಸ್ ಪೋಪೋನ್ ಮತ್ತು ಫಿಲಿಪ್ ಬುರ್ವೇ ಮುಂತಾದವರು ಬಂದನಂತರ ಆಲ್‌ಫನ್ಸೋ ಡಾಡೇ ಬರುತ್ತಿದ್ದರು. ಆವರು ಬಹಳ ಗಡಿ ಬಿಡಿಯ ಜೀವಿ. ತನ್ನೊಂದಿಗೆ ಪ್ಯಾರಿಸದ ಸಮಸ್ತ ಪ್ರಪಂಚದ ವಿಷಯ ವನ್ನೆಲ್ಲ ಒಂದೆರಡು ನಿಮಿಃಗಳಲ್ಲಿ ಹೇಳಿಬಿಡುತ್ತಿದ್ದರು. ಅವರು ವಿಲಾಸ ಪ್ರಿಯರು, ಅವರ ಮಾತಿನಲ್ಲಿ ತಿಳಿಹಾಸ್ಯ ಎಳೆನಗು, ವಿಚಿತ್ರ ವ್ಯಕ್ತಿಗಳ ವರ್ಣನೆ ಎಲ್ಲವೂ ಕಾಣಬಹುದಾಗತ್ತು. ನೋವಾಗದಂತಹ ಹಾಸ್ಯದಲ್ಲಿ ಅವರು ಚಿತ್ರಿಸುವ ವ್ಯಕ್ತಿ ಚಿತ್ರಗಳು ಬಹಳ ಮಹತ್ವದ್ದಾಗಿದ್ದವು. ತನ್ನ ಹಾವ ಭಾವಗಳಿಂದ ಅವುಗಳನ್ನು ವರ್ಣಿಸುವಾಗ ಅವರ ನಟನ ಕಲೆಯ ಶಕ್ತಿಯು ನಮಗೆ ವಿದಿತವಾಗುತ್ತಿತ್ತು. ಇವರ ನಂತರ ಇನ್ನೊಬ್ಬ ಪಿಚಿತ್ರ ವ್ಯಕ್ತಿ ಎಮಿಲ್ ಝೋಲಾ ಬರುತ್ತಿದ್ದರು. ಅವರ ಜತೆಗೆ ಬರುತ್ತಿದ್ದವರೆಂದರೆ ಪಾಲ್ ಅವೆಕ್ಸೇ ಸ್ಥೂಲಕಾಯಗಾಮಿಗಳಾದ ಇವರಿಬ್ಬರೂ ಕೋಣೆಯನ್ನು ಪ್ರವೇಶಿಸುವಾಗ ತೇಕುತ್ತ ಬರುವದನ್ನು ಎಲ್ಲರೂ ನೋಡಿ ಒಳಗೊಳಗೇ ನಗುತ್ತಿದ್ದರು. ಅವನು ಬಂದಕೂಡಲೇ ಬರಿದಾದ ಆಸನದ ಮೇಲೆ ಕುಳಿತು ಮಾತು ಆರಂಭಿಸುವ ಮುನ್ನ ಅಲ್ಲಿಯ ಜನರ ಮನೋಗಡ ವೆಂತಹದೆಂಬ ದನ್ನು ಅರಿಯಲು ಅವನು ಉತ್ಸುಕನಾಗಿದ್ದ. ಇವರ ಹಿಂದೆ ಪ್ರಕಟನಕಾರ ಕಾರ್‌ಪೇನೇ ಉತ್ಸಾಹ ಕವಿ ಕಾಟುವೇ ಮೆಂಡೇ ಆತನ ಭಾವ ಮೈದುನ ಎಮಿಲ್ ಬರ್ಗೇರ್ ಗೇಟೀನ ಅಳಿಯನಂತೆ ಬರುವರು. ಆ ಕಾಲದ ಸುನೀ ತಗಳ ಕಪ್ರುವೆಂದು ಹೆಸರಾಂತ ಕವಿ ಜೋಸ್ ಮೇರೇ ದ ಹೆರೇದೇ ಬಂದ

ಮೇಲೆ, ಹುಸ್ಸೀಮನ್ನ, ಹೆನ್ನೀ, ಸಿಮೇಕ, ಲಿಯೂ ಕ್ಲಾಡೆ, ಚತುಷ್ಟಯರು ಬರುವರು. ಕೊನೆಗೆ ಈ ಎಲ್ಲರ ಹಿಂದುರೆಂದೆಂಬ ಅಹಂಭಾವದ ಕೂಸು ಎಡ್‌ಮಂಡ್ ದ ಗಾನ್‌ಕೋರ್ ಬಂದಮೇಲೆ ಸಭೆ ಪೂರ್ಣರೂಪ ತಾಳುತ್ತಿತು.

ಈ ವರದಿ ನಿನಗೆ ಬೇಸರವಾಯಿತೇ, ಕ್ಷಮಿಸು. ಇಂತಹ ಪ್ರಮುಖ ಜನರ ಪರಿಚಯ ಮಾಡಿಕೊಟ್ಟು ನನ್ನನ್ನು ಓರ್ವ ಸಾಹಿತಿಯನ್ನಾಗಿ ಮಾಡಲು ಕಾರಣರಾದ ಫ್ಲಾಬೇರರಿಗೆ ನಾನು ತುಂಬಾ ಋಣಿಯು.

**ನಿನ್ನವನೇ —ಗಾಯ್"**

– ೨೦ –

ಮೋಪಾಸಾನು ತನ್ನೋರ್ವ ಮಿತ್ರನಿಗೆ ೧೮೮೦ ಬರೆದ ಪತ್ರದ ಕೆಲವಂಶ ಹೀಗಿದೆ. ಸರಕಾರದ ಉದ್ಯೋಗಗಳಲ್ಲಿರುವ ಗುಮಾಸ್ತರ ಅವಸ್ಥೆಯನ್ನು ಕುರಿತು ಈ ಪತ್ರದಲ್ಲಿ ಹೀಗೆ ಬರೆದಿರುವನು:—

**"ಮಿತ್ರನೇ,**

ಸರಕಾರದ ಕೆಲಸದಲ್ಲಿರುವ ಎಲ್ಲರಿಗಿಂತಲೂ ಬಲು ಹೇಸಿಯಾದ ಕೆಲಸವೆಂದರೆ, ಗುಮಾಸ್ತಗಿರಿ. ಇವರ ಅವಸ್ಥೆ ಬಲು ಶೋಚನೀಯ. ಅವರು ಜೀವಿಸಲು ಹೆಣಗಾಡುವದನ್ನು ನೋಡಿದರೆ ಯಾರಿಗೂ ಇಂತಹ ಅವಸ್ಥೆ ಬೇಡೆಂದೆನಿಸುತ್ತದೆ. ಪದವೀಧರರಾಗಿ, ಆದೇ ತಾನೇ ಕಾಲೇಜಿನಿಂದ ಬಂದಿರುವೆವೆಂಬ ಹೆಮ್ಮೆಯಿಂದ ಬಂದ ಇವರು ಕಛೇರಿಯಲ್ಲಿ ಕಾಲಿಟ್ಟಕೂಡಲೇ ತಮ್ಮ ವೈಯಕ್ತಿಕತೆಯನ್ನು ಕಳೆದುಕೊಂಡು ಕುರಿಗಳಂತೆ ದುಡಿಯಬೇಕಾಗುತ್ತದೆ. ಇವರು ಕಾಲೇಜುಗಳಲ್ಲಿ ಪಡೆದ ಪದವಿಗಳಿಗೆ ಮನ್ನಣೆ ಇಲ್ಲ. ಅವರ ವಿದ್ಯೆಗೆ ಮರ್ಯಾದೆ ಮೊದಲೇಇಲ್ಲ. ಇಷ್ಟು ಓದಿಕೊಂಡು ಬಂದಿರುವರೆಂದು ಅವರ ಮೇಧಾಶಕ್ತಿಯನ್ನು ಪರೀಕ್ಷೆ ಮಾಡಲು ಹೊರಟರೆ ಅವರ ಅಜ್ಞಾನ ಹೊರಬೀಳುತ್ತಿದೆ. ಜೀವನದ ಸಮಸ್ಯೆಗಳನ್ನರಿಯದ, ಪ್ರಪಂಚಜ್ಞಾನವನ್ನು ದಯಪಾಲಿಸದ, ಜ್ಞಾನಶೂನ್ಯರನ್ನಾಗಿ ಮಾಡಿದ ಈ ವಿಶ್ವವಿದ್ಯಾನಿಲಯದ ಪದವಿಗಳು ಕೇವಲ ಕಾಗದದ ಕರಡುಗಳೇ.

ಆಯಿತು ಕೆಲಸವನ್ನು ಮಾಡಲು ಕುಳಿತ ಇವರ ದಡ್ಡತನ ಕೂಡಲೇ ಹೊರಬೀಳುತ್ತದೆ. ಇನ್ನು ಮೇಲಧಿಕಾರಿಗಳ ಕ್ರೂರ ವರ್ತನೆಯೋ ಹೇಳ ತೀರದು. ಆ ಮಹಾನುಭಾವರು ತಾವು ಒಂದು ಸಮಯ ಇಂಥ ಸಾಮಾನ್ಯ ಗುಮಾಸ್ತರಾಗಿ ಕೆಲಸ ಮಾಡಿದವರೆಂಬುದನ್ನು ಮರೆತು ವರ್ತಿಸುವ ರೀತಿ ತೀರ ಹೊಲಸು. ಭಿಕ್ಷುಕನಾಗಿ ಬೀದಿಯಲ್ಲಿ ಅಲೆದು ಜೀವಿಸಬಹುದು. ಆದರೆ ಈ ಗುಲಾಮಗಿರಿಯ ಕೆಲಸ ಯಾರಿಗೂ ಬೇಡ. ಇದು ನನ್ನ ಸ್ವಂತ ಅನುಭವ. ಅಲ್ಲದೆ ನನಗಿಂತಲೂ ಕೀಳು ದರ್ಜೆಯ ಸ್ಥಳಗಳಲ್ಲಿ ಕೆಲಸ ಮಾಡಿದವರ ಅನುಭವ. ಇದೇ ವಿಷಯವನ್ನೊಳಗೊಂಡ ಒಂದು ನನ್ನ ಕೃತಿ ಬೇಗ ಪ್ರಕಟವಾಗಲಿದೆ. ಅದನ್ನು ಓದಿ ನಿನ್ನ ಮನಸ್ಸಿಗೆ ನೆಮ್ಮದಿಯನ್ನು ತಂದುಕೋ.

ನಿನ್ನವನೇ —**ಗಾಯ್**''

– ೨೧ –

(೧೮೮೦ ರಲ್ಲಿ ಮೋಪಾಸಾನು ಸರಕಾರೀ ಕೆಲಸದಿಂದ ದೂರ ಸರಿದ. ಮುಂದೆ ಅವನ ಲೇಖನ ಕಲೆಗೆ ಹೆಚ್ಚು ಮಹತ್ವ ಬಂದಿತು. ಆ ಸಮಯದಲ್ಲಿ ಗಾಮೋ (Gaulois) ಪತ್ರಿಕೆಯ ಸಂಪಾದಕನು ಕೆಲವುಸಾಹಿತಿಗಳ ವ್ಯಕ್ತಿ ಚಿತ್ರವನ್ನು ಬರೆಯ ಬೇಕೆಂದು ಕೇಳಿದಾಗ ಝೋಲಾನಿಗೆ ಬರೆದ ಪತ್ರವಿದು).

**''ಪ್ರಿಯ ಝೋಲಾ ಇವರಿಗೆ,**

ಈಗೆರಡು ವಾರಗಳಿಂದ ಗಾಮೋಪತ್ರಿಕೆಯ ಸಂಪಾದಕನು ನನ್ನನ್ನು ವ್ಯಕ್ತಿ ಚಿತ್ರಗಳನ್ನು ಬರೆಯಬೇಕೆಂದು ಒತ್ತಾಯಪಡಿಸುತ್ತಿರುವನು. ಮೊದ ಲಿಗೆ ನನಗೆ ತಿಳಿದ ಸಾಹಿತಿಗಳದು ಆಗಬೇಕಂತೆ ಪ್ರಥಮ ಲೇಖನ ತಮ್ಮನ್ನೂ ಕುರಿತೇ ಬರೆಯಬೇಕಂತೆ ಈ ಬಗೆಯ ಬರವಣಿಗೆ ನಾನು ಕೈಕೊಳ್ಳುವದು ನಿಮಗೆ ರುಚಿಸುವದಿಲ್ಲವೆಂದು ನಾನು ಪ್ರತಿಭಟಿಸಿದೆ. ಆದರೆ ಆತನು ಈ ರೀತಿಯ ಲೇಖನಗಳಿಂದ ಸಾಹಿತ್ಯ ಪ್ರಚಾರವಾಗುವದು ಒಳಿತೆಂಬ ಅಭಿ ಪ್ರಾಯ ನಿಮ್ಮದೆಂದು, ಇದಕ್ಕೆ ನಿಮ್ಮ ಸಮ್ಮತಿ ಇದೆಯೆಂದೂ, ಹೇಳಿದಮೇಲೆ ಒಪ್ಪಿಕೊಂಡಿದ್ದೇನೆ. ಈಗಾಗಲೇ ಪ್ರಕಟವಾದ ಅನೇಕ ಲೇಖನಗಳು (ನಿಮ್ಮ

ಬಗ್ಗೆ) ಅಷ್ಟು ಚನ್ನಾಗಿಲ್ಲವೆಂದು, ನನ್ನ ಲೇಖನಿಯಿಂದ ನಿಮ್ಮ ವ್ಯಕ್ತಿ ಚಿತ್ರ ಹೊರಬಂದರೆ ಒಳಿತೆಂದು ಆತ ಒತ್ತಾಯಮಾಡಿದುದರಿಂದ ನಾನು ಈ ಕೆಲಸಕ್ಕೆ ಒಪ್ಪಿರುವೆನು. ನಿಮ್ಮ ಬಗ್ಗೆ ಬರೆದ ಲೇಖನ ಪ್ರಕಟವಾದನಂತರ ನನಗೆ ಸೂಕ್ತ ಸಲಹೆಗಳನ್ನು ಕೊಡಿ.

ನಿಮ್ಮವನೇ —**ಗಾಯ್**"

– ೨೨ –

[ ಝೋವಾದಿಂದ ಗಾಯ್‌ನು ಝೋಲಾನಿಗೆ ಬರೆದ ಈ ಪತ್ರ ಇವರಿಬ್ಬರ ನಡುವೆ ಬೆಳೆದುಬಂದ ಸ್ನೇಹವನ್ನು ವ್ಯಕ್ತಮಾಡುತ್ತದೆ. ಝೋವಾ ಆಫ್ರಿಕೆಯಿಲ್ಲಿದ್ದ ಒಂದು ನೀರಿನ ಆರೋಗ್ಯಧಾಮ. ]

**ಪೂಜ್ಯ ಝೋಲಾ ಇವರೆ,**

ತಮ್ಮ ವಾಣಿಯನ್ನು ನಾನು ಈ ದೂರದೇಶದಲ್ಲಿ ನಿಮ್ಮ ಲೇಖನದ ಮೂಲಕ ಕೇಳುತ್ತಿದ್ದೇನೆ. ತಂಪು ಹವೆಯ ಮಧ್ಯೆ ಕುಳಿತು ಬರೆದ ಈ ನಿಮ್ಮ ಲೇಖನ ಅತ್ಯಂತ ಬಿಸಿ ಹವೆಯ ಮಧ್ಯ ಇರುವ ನನಗೆ ಹೆಚ್ಚಿನ ಆನಂದವನ್ನು ಕೊಡುತ್ತಿದೆ. ನನ್ನ ಏಕಾಂತವನ್ನು ಹೊಡೆದೋಡಿಸುತ್ತಿದೆ. ನನಗೆ ಆದ ಆನಂದವನ್ನು ತಮಗೆ ಈ ಮೂಲಕ ವ್ಯಕ್ತಮಾಡುತ್ತಿದ್ದೇನೆ. ನಿಮ್ಮ ಲೇಖನ (ನನ್ನ ಬಗ್ಗೆ ಬರೆದುದು) ಫಿಗಾರೊದಲ್ಲಿ ಪ್ರಕಟವಾಗುವಂತೆ ನೀವು ಹಟ ಹಿಡಿಯುವಿರೆಂದು ನನಗೆ ಅನಿಸಿತ್ತು. ಅವರ ಮೇಲೆ ನಿಮ್ಮ ವರ್ಚಸ್ಸು ಎಂತಹದೆಂಬುದು ನನಗೆ ತಿಳಿದಿತ್ತು. ಕೊನೆಗೆ ನೀವು ಜಯಶಾಲಿಗಳಾದಿರಿ. ನನ್ನಂಥ ಬಡ ಬರಹಗಾರನಲ್ಲಿ ನೀವು ಕಂಡ ಘನತೆ ಏನೆಂಬುದು ನನಗೆ ತಿಳಿಯದಂತಿದೆ. ನನ್ನ ಕಾವ್ಯಶಕ್ತಿಯ ಬಗ್ಗೆ ಬರೆದ ಈ ನಿಮ್ಮ ಲೇಖನಕ್ಕೆ ನಾನು ಅತ್ಯಂತ ಋಣಿಯಾಗಿದ್ದೇನೆ. ಈ ಎರಡು ವಾರಗಳಲ್ಲಿ ಪ್ಯಾರಿಸದ ವಿಷಯಗಳನ್ನು ತಿಳಿಸುವ ಈ ಪತ್ರಿಕೆ ನನಗೆ ಹೆಚ್ಚಿನ ಉತ್ಸಾಹವನ್ನುಂಟು ಮಾಡಿದೆ. ನನಗೆ ಅಲ್ಲಿಂದ ಯಾವ ಪತ್ರಗಳೂ ಬಂದಿಲ್ಲ. ಈ ನನ್ನ ಪತ್ರವು ನಿಮಗೆಂದು ಸೇರುವದೋ ತಿಳಿಯದು. ನನ್ನ ತಿರುಗಾಡುವ ಪ್ರಕೃತಿಗೆ ಅನುಗುಣವಾದ ಹವ್ಯಾಸವೇ ನನಗೆ ಇಲ್ಲಿ ದೊರೆತಿದೆ. ಒಂದೇ ಕಡೆ ಕುಳಿತುಕೊ

ಳ್ಳುವದು ನನ್ನಿಂದ ಆಗದ ಕೆಲಸ. ಇಲ್ಲಿಯ ಯುದ್ಧದ ವಾತಾವರಣದಲ್ಲಿ ನಾನು ಪ್ರತಿದಿನವೂ ಸೈನ್ಯದೊಂದಿಗೆ ಹರಿದಾಡುತ್ತಿರುವೆನು. ಶತ್ರು ಪಕ್ಷದ ಅರಬೀ ಜನರು ನಮ್ಮನ್ನು ಎಂದು ಮುತ್ತುವರೋ, ಕಾಳಗವು ಎಲ್ಲಿ, ಹೇಗೆ, ಎಂದು ಆರಂಭವಾಗುವದೆಂಬುವುದು ಅನಿಶ್ಚಿತ. ಈ ಎಲ್ಲ ವಾತಾವರಣ ನನ್ನ ಮನೋವೃತ್ತಿಗೆ ಹೆಚ್ಚಿನ ಅನುಕೂಲವನ್ನುಂಟು ಮಾಡುತ್ತಿದೆ. ಮತ್ತೊಮ್ಮೆ ವಿವರಗಳಿಗೆ ಪತ್ರ ಬರೆಯುವೆ.

ನಿಮ್ಮವನೇ —**ಗಾಯ್**

– ೨೩ –

[ ಕಾರ್ಸಿಕಾ (Corsica) ಕ್ಕೆ ಪ್ರವಾಸಕ್ಕೆಂದು ಮೋಪಾಸಾ ತಾಯಿಯೊಂದಿಗೆ ತೆರಳಿದಾಗ ತನ್ನ ಮೈದುನನಾದ ಲೂಯೀಯ ಹೆಂಡತಿಗೆ ಬರೆದ ಪತ್ರ ಇದು ]

( 1882 August 1 )

**"ಪ್ರಿಯ ತಂಗಿಯೇ,**

ಅಜಾಷಿಯೋಕ್ಕೆ ನನ್ನ ಬರುವಿಕೆಯನ್ನು ಎಲ್ಲ ಪತ್ರಿಕಾಕರ್ತರೂ ದೊಡ್ಡ ದೊಡ್ಡ ಅಕ್ಷರಗಳಲ್ಲಿ ಪ್ರಕಟಿಸಿರುವರು. ನನ್ನ ಈ ಪ್ರವಾಸದ ಗುಟ್ಟು ಅವರಿಗೆ ಹೇಗೆ ತಿಳಿಯಿತೋ ನನಗೆ ತಿಳಿಯದು. ಆದರೆ ನಾನಿಲ್ಲಿ ಬಂದವನೇ ಇಲ್ಲಿಯ ಸರಕಾರಿಯ ಅಧಿಕಾರಿಯ ದುರ್ನಡತೆಯ ಬಗ್ಗೆ ಬಲು ಕಟುವಾಗಿ ಬರೆದಿರುವೆನು. ಆತನು ನನ್ನ ಮೇಲೆ ಬಲು ಕೋಪಗೊಂಡಿರುವನಂತೆ. ಆದರೆ ನಾನು ಅವನ ಸೇಡನ್ನು ಮತ್ತೊಂದು ರೀತಿಯಲ್ಲಿ ತೀರಿಸಿಕೊಳ್ಳುವೆನು. ಇಲ್ಲಿಯ ಗುಡ್ಡಗಾಡುಗಳು ನಿನಗೆ ಹೆಚ್ಚಿನ ಮಾನಸಿಕ ಆನಂದವನ್ನುಂಟು ಮಾಡಿವೆ. ದಿನವೂ ನಾನು ಅಲ್ಲಿಗೆ ವಿಹಾರಕ್ಕೆಂದು ಹೋಗುತ್ತಲಿದ್ದೇನೆ. ಈ ಮಧ್ಯ ಸಮುದ್ರದ ಹವೆಯು ನನ್ನ ಪ್ರಕೃತಿಗೆ ಹೊಂದಿಕೊಂಡಿದೆ. ನನಗಾಗುವ ಆನಂದವನ್ನು ಲೇಖನಗಳಲ್ಲಿ ವರ್ಣಿಸುವೆನು. ಅವುಗಳನ್ನು ಓದಿ ನೀನು ಆನಂದಿಸಬಹುದು. ನಿನ್ನ ಗಂಡನಾದ ಲೂಯೀಗೆ ಓದಿ ಹೇಳಬಹುದು. ಈ ಸಾಗರದ ನೀರಿನಲ್ಲಿ ಮೀನು ಹಿಡಿಯುವುದೊಂದು ಸುಂದರ ಕೆಲಸ.

ನನ್ನ ತಾಯಿಯೂ ನನ್ನೊಂದಿಗೆ ಬಂದಿರುವಳು. ನಿನಗೆ ಬೇಸರವೆ? ಮತ್ತೊಮ್ಮೆ ಬರೆಯುವೆ.

ನಿನ್ನವನೇ —**ಗಾಯ್**”

— ೨೪ —

(೧೮೮೩ ಜನೇವರಿಯಲ್ಲಿ ಮೋಪಾಸಾನು ಏತ್ರೇದಲ್ಲಿಯ ತನನಿ ವಿಶ್ರಾಂತಿಗೃಹದಿಂದ ತಾಯಿಗೆ ಬರೆದ ಪತ್ರ. ತನ್ನ ಸಾಹಿತ್ಯ ವ್ಯವಸಾಯ ಹೇಗೆ ಸಾಗಿದೆಯೆಂಬುದು ಇದರಲ್ಲಿ ವ್ಯಕ್ತವಾಗಿದೆ.

**ಮಮತೆಯ ತಾಯೆ,**

ಇಲ್ಲಿಯ ನನ್ನ ಕೋಣೆ ಬಲು ಸಣ್ಣದು. ಟೇಬಲ್ ಸಹಿತ ಬಲು ಚಿಕ್ಕದು. ಆದರೂ ಇದರಲ್ಲಿಯೇ ಅನುವು ಮಾಡಿಕೊಂಡು ನಿನಗೆ ಬೇಸರವಾಗಬಾರದೆಂದು ಪತ್ರವನ್ನು ಬರೆಯುತ್ತಿರುವೆನು. ನನ್ನ ಎರಡು ನಾಯಿಗಳು ಬಹಳ ಬಳಲಿವೆ. ಅವು ನನ್ನ ಕಾಲಬಳಿ ಇಲ್ಲಿ ಕುಳಿತಿವೆ ಅವುಗಳಿಗೆ ನೆಗಡಿ ಬಂದಂತಿದೆ. ನನಗೂ ಬಹಳ ನೆಗಡಿ ಹಿಡಿದಿದೆ. ರಾತ್ರಿ ಪೂರ್ಣ ಮಂಜಿನ ಹವೆಯಲ್ಲಿ ಗಾಡಿಯಲ್ಲಿ ಬಂದೆ. ಇಲ್ಲಿ ಬೆಚ್ಚನ್ನ ವಾತಾವರಣವನ್ನು ಉಂಟುಮಾಡಿಕೊಳ್ಳಲು ಸಾಧನಗಳೇ ಇಲ್ಲ. ಮನೆಯ ಸುತ್ತಲೂ ಬಟ್ಟ ಬಯಲು ಹಿಮ ತುಂಬಾಬಿದ್ದಿದೆ. ಗಾಳಿ ಬಿರುಸಾಗಿ ಬೀಸುತ್ತಿದೆ. ದೀಪವು ಆರಿಹೋಗುವೆನೆಂದು ಬೆದರಿಸುತ್ತಿದೆ. ಒಲೆಯಲ್ಲಿ ಬೆಂಕಿಯ ಬೆಳಕಿನಲ್ಲೇ ಈ ಕಾಗದವನ್ನು ಬರೆಯುತ್ತಿದ್ದೇನೆ. ಆದರೆ ಈ ಉರಿಯ ಶಕೆ ನನ್ನ ಕೋಣೆಯ ತಂಪನ್ನು ಹೋಗಲಾಡಿಸದು. ನನ್ನಸುತ್ತಲೂ ನಿರ್ಜೀವ ವಸ್ತುಗಳು (ಹಳೆಯವು) ಸುಮ್ಮನೆ ಇದ್ದ ಸ್ಥಳದಲ್ಲೇ ಬಿದ್ದಿವೆ. ಅವುಗಳು ನನ್ನಲ್ಲಿ ನಿರಾಶೆಯನ್ನುಂಟು ಮಾಡಿವೆ. ಎಲ್ಲೆಲ್ಲಿಯೂ ಮೌನ. ಈ ನಗರವು ಈ ಮಂಜಿನ ಹೊದಿಕೆಯಲ್ಲಿ ಸತ್ತು ಮಲಗಿದಂತಿದೆ. ಸಮುದ್ರದ ಸದ್ದೂ ಅದೇಕೋ ಕೇಳಿಸುತ್ತಿಲ್ಲ. ಮನೆಯಲ್ಲಿರುವ ಈ ಮೌನಕ್ಕಿಂತಲೂ ನನ್ನ ಮನೆಯ ಹೊರಗಿನ ಶಾಂತಿ ವಾತಾವರಣವು ನನ್ನನ್ನು ಗೊಂದಲದಲ್ಲಿ ಕೆಡುವುತ್ತಿದೆ. ನನ್ನಲ್ಲಿ ಭೀತಿಯನ್ನುಂಟುಮಾಡುತ್ತಿದೆ. ಈಗ ತಿಳಿಯತೊಡಗಿದೆ. ಮಾನವ ಜೀವನವು ಒಂದಿ

ಲ್ಲೊಂದು ದಿನ ಸದ್ದಿಲ್ಲದೆ ಸುಮ್ಮನಾಗಬೇಕಾದುದು ಪ್ರಕೃತಿಯ ನಿಯಮ. ಗುರಿಯಿಲ್ಲದೆ ಮಾನವರು ಜಗತ್ತಿನಲ್ಲಿ ಅಲೆಯುವುದು ನಿಷ್ಫಲವೇ ಸರಿ. ಎಲ್ಲವೂ ಶೂನ್ಯವೆಂಬದು ಮಾನವನಿಗೆ ಬೇಗ ಅರ್ಥವಾಗಲಾಗದು. ಈ ಹವೆಯಲ್ಲಿ ನನ್ನ ಮೆದುಳು ವೇಗದಿಂದ ಕೆಲಸ ಮಾಡಲಾರದು. ಇದೀಗ ಮತ್ತೊಂದು ಸೂಳೆಯಾಗಿ ಬಾಳಿದ ಹೆಣ್ಣಿನ ದು:ಖ ಭಾಜನ ಜೀವನವನ್ನು ಚಿತ್ರಿಸುವ ಕತೆಯನ್ನು ಬರೆದು ಮುಗಿಸುತ್ತಲಿದ್ದೇನೆ. ಈ ಕತೆ ನನ್ನ ಆ 'ಬೆಣ್ಣೆಯ ಮುದ್ದೆಯ' ಕತೆಯಷ್ಟೇ ಇದೂ ಸೊಗಸಾಗಿದೆ. ಏಕೆ ಈ ಕತೆ ಅದನ್ನೂ ಮೀರಿಸಬಲ್ಲದೆಂದು ನನ್ನ ಮತ. ಇದರ ಹೆಸರು "ಮದಾಂ ಟೆಲ್ಲೀಯಮನೆ" ಇದರ ವಿವರ ಮತ್ತೆ ಬರೆಯುವೆ. ಪತ್ರ ಇಲ್ಲಿಗೆ ಸಾಕು. ನಮಸ್ಕಾರ.

ನಿಮ್ಮವನೇ —**ಗಾಯ್**

– ೨೫ –

[ಆಫ್ರಿಕಾ ದೇಶದಲ್ಲಿ ಪ್ರವಾಸದಲ್ಲಿರುವ ಮೋಪಾಸಾ ಮಿತ್ರನೋರ್ವನಿಗೆ ತನ್ನ ಅನುಭವಗಳನ್ನು ಮುಂದೆ ಈ ಪ್ರವಾಸದ ವಿಷಯಗಳನ್ನು ಹೇಗೆ ಬಳಸಿಕೊಳ್ಳುವನೆಂಬದು ಈ ಪತ್ರದಲ್ಲಿ ಸೂಚಿಸಿರುವನು.]

**ಮಿತ್ರನೇ—**

ಪ್ಯಾರಿಸನ್ನು ಜುಲೈ ಆರನೇ ದಿನಾಂಕ ಬಿಟ್ಟುಬಂದೆ. ಈ ದೇಶವನ್ನು ಅತ್ಯಂತ ಬಿಸಿಲಿನಿಂದ ಪ್ರಕಾಶಿಸುವಾಗ ನೋಡಬೇಕೆಂದು ನನ್ನ ಆಶೆ ಇತ್ತು. ಇಲ್ಲಿ ಹೆಚ್ಚು ಬೆಳಕು, ಕಾವು ಇರುವ ಸಮಯ ಹೇಗಿರಬೇಕೆಂಬುದನ್ನು ತಿಳಿಯುವ ಮನಸ್ಸು ನನ್ನದಾಗಿತ್ತು. ಅಲ್ಜೀರಿಯಾ ದೇಶವನ್ನು ನಾನು ಹೆಚ್ಚು ಪ್ರೀತಿಸುತ್ತೇನೆ. ಆಗ ದೇಶದಲ್ಲಿ ಹರಡಿಕೊಂಡಿದ್ದ ದಂಗೆಯ ವಾತಾವರಣದಲ್ಲಿ ಆ ದೇಶದವರ ವರ್ತನೆ, ಅವರ ಯುದ್ಧಮಾಡುವ ಕ್ರಮ ಮುಂತಾದುವನ್ನು ತಿಳಿಯುವ ಮನಸ್ಸು ನನಗಿತ್ತು. ಈ ಅರಬ್ಬೀ ಜನರ ಹೃದಯವೆಂತಹದೆಂಬುದನ್ನು ಅರಿಯಬೇಕಿತ್ತು. ಫ್ಲಾಬೇರರು ಈ ಮರುಭೂಮಿಯನ್ನು ನೋಡಿ ಗಾಬರಿಗೊಂಡಿದ್ದರು. ಅಲ್ಲಿಯ ಗೋಪುರಾಕೃತಿಯ ಕಟ್ಟಡಗಳು

(ಪಿರಮಿಡಗಳು) ಮತ್ತು ಸ್ಫಿಂಕ್ಸ (ಸಿಂಹದ ದೇಹ ಮತ್ತು ಮಾನವ ದೇಹಾಕೃತಿಯ ಪ್ರತಿಮೆ) ಮುಂತಾದವುಗಳನ್ನು ನೋಡಲು ಹೆದರುತ್ತಿದ್ದರಂತೆ. ಆದರೆ ಇದರಲ್ಲಿ ಅಂತಹ ಭಯಾನಕ ವಿಷಯವೇನಿದೆಯೆಂಬುದನ್ನು ತಿಳಿಯಬೇಕೆಂದು ನಾನು ನಿಶ್ಚಯಿದೆ. ಇಂತಹ ಪ್ರದೇಶಗಳನ್ನು ಯಾರು ನೋಡಬಾರದೆಂದು ಹೇಳುವರೋ ಅಂತಹದನ್ನು ನೋಡಿಯೇ ತೀರಬೇಕೆಂಬ ಹಂಬಲ ನನ್ನದಾಗಿತ್ತು. ಇದು ನಾನು ಆಫ್ರಿಕೆಗೆ ಬರಲು ಎರಡನೆಯ ಕಾರಣ. ತುರ್ಕೀ ದೇಶದ ಕ್ಷೌರಿಕನು ಅತ್ಯಂತ ಹೆಸರುವಾಸಿಯಂತೆ. ಅವನ ವೈಶಿಷ್ಟ್ಯವೇನೆಂಬುದನ್ನು ತಿಳಿಯಬೇಕೆಂದಿದ್ದೇನೆ. ಅವನು ಮನೆಯ ಮುಂದೆ ನೆಲದ ಮೇಲೆ ಕುಳಿತು ತನ್ನ ಕೆಲಸ ಹೇಗೆ ಮಾಡುವನೆಂಬುದನ್ನು ನಾನು ನೋಡಬಯಸುತ್ತೇನೆ. ಈ ಎಲ್ಲ ಕಾರಣಗಳು ನನ್ನ ಈ ಆಫ್ರಿಕಾ ದೇಶದ ಪ್ರವಾಸಕ್ಕೆ ಕಾರಣಗಳಾದವು. ಸಮಕ್ಷಮ ಬಂದಾಗ ಹೆಚ್ಚಿನ ವಿವರಗಳನ್ನು ಹೇಳುವೆನು. - ಏಕೆ ಪತ್ರಿಕೆಯಲ್ಲಿ ದೊಡ್ಡ ಲೇಖನವನ್ನೇ ಬರೆಯುವೆನು.

**ನಿನ್ನವನೇ—ಗಾಯ್**

– ೨೬ –

[ಮತ್ತೋರ್ವ ಮಿತ್ರನಿಗೆ ಮೋಪಾಸಾನು ಕೀರ್ತಿಯ ಶಿಖರದಲ್ಲಿರುವಾಗ ಬರೆದ ಈ ಪತ್ರದಲ್ಲಿ ತನ್ನ ಲೇಖನ ಕಲೆಯ ಬಗ್ಗೆ, ತಾನು ಹೇಗೆ ಸ್ಫೂರ್ತಿಯಿಂದ ಬರೆಯುವನೆಂಬದನ್ನು ಕಾಣಬಹುದು.]

“ನನ್ನ ಕೆಲಸ ಕೇವಲ ಬರೆಯುವುದಕ್ಕೆಂದು ನನಗೆನಿಸಿದೆ: ನಾನು ಜನ್ಮತಾಳಿದುದು ಇದೇ ಕಾರಣವೆಂದು ಹೇಳಬಹುದು. ನನಗಿರುವ ಶ್ರದ್ಧೆ, ಕಾರ್ಯ ನಿಷ್ಠತೆ, ಕಾರ್ಯದಲ್ಲಿ ಕಂಡು ಬರುವ ಶಿಸ್ತು, ಇವೆಲ್ಲವುಗಳನ್ನು ನೋಡಿದರೆ ನಾನು ಓರ್ವ ಚಿತ್ರಗಾರನಾಗಿಯೋ ಇಲ್ಲವೆ, ಸಾಹಿತಿಯಾಗಿಯೋ ಕೀರ್ತಿಗಳಿಸಲೆಂದೇ. ಲೆಕ್ಕತಪಾಸಣೆ ನನಗೆ ಸೇರದ ಕೆಲಸ–ನಾನು ಜನ್ಮತಾಳಿದಂತಿದೆ. ಕಛೇರಿಯಲ್ಲಿ ಕೆಲಸ ಮಾಡುವಾಗ ನನಗಾವ ಯೋಚನೆಯೂ ಇರಲಿಲ್ಲ. ನನ್ನ ಊಹಾಶಕ್ತಿಯೇ ಕುಗ್ಗಿ ಹೋಗುತ್ತಿತ್ತು. ನನಗೆ ಬರೆಯುವುದೆಂದರೆ ಒಂದು ಹುಮ್ಮಸಿನ ಕೆಲಸ. ನನಗೆ ಮನಸ್ವಾತಂತ್ರ್ಯ

ಸಿಕ್ಕಂತೆಯೇ ಬರೆಯುತ್ತ ಕುಳಿತರೆ ನನಗೆ ಯಾವ ತೊಂದರೆಯೂ ಆಗುವದಿಲ್ಲ. ನನ್ನ ಮನಸ್ಸಿನಲ್ಲಿ ಉದ್ಭವಿಸುವ ಎಲ್ಲ ಯೋಚನೆಗಳನ್ನು ಕಛೇರಿಯ ನಾಲ್ಕು ಗೋಡೆಗಳ ಇರುಕಿನಲ್ಲಿ ಸಿಂತು ಬರೆಯುವುವೆಂದರೆ ಬಲು ಬೇಸರ. ತಿಳಿಯಾದ ಹವೆಯಲ್ಲಿ ಸೂರ್ಯನ ಪೂರ್ಣ ಪ್ರಕಾಶದಲ್ಲಿದ್ದು ಹರಿದಾಡುವದೆಂದರೆ ನನಗೆ ಪರಮ ಸಂತೋಷ. ಇಂತಹ ಇಕ್ಕಟ್ಟಿನಿಂದ ಪಾರಾಗುವುದೆಂದರೆ ಬರೆವಣಿಗೆಯಿಂದಲೇ ನನ್ನ ಲೇಖನಿಯೇ ನನಗೆ ಮಾನಸಿಕ ಸುಖವನ್ನು ತಂದೊಡ್ಡಿತು. ಈ ಕೆಲಸದಲ್ಲಿ ನನಗೆ ದೊರೆತ ಆನಂದವೇ ನನ್ನನ್ನು ಬರವಣಿಗೆಗೆ ಪ್ರೇರೇಸಿತು."

ನಿನ್ನವ-ಗಾಯ್

– ೨೭ –

[ ಗಾಯ-ದ-ಮೋಪಾಸಾನು ತನ್ನ ಸಾಹಿತ್ಯ ರೀತಿನೀತಿಗಳಬಗ್ಗೆ ಮಿತ್ರ ನೋರ್ವನಿಗೆ ಬರೆದಿರುವ ಪತ್ರ ಇದು. ]

**ನನ್ನ ಸಾಹಿತ್ಯ ಮಿತ್ರನೇ,**

ನಾವೆಲ್ಲರೂ ಸೇರಿ ಹೊರಡಿಸಬೇಕೆಂದಿರುವ ಪರಿಚಯ ಪತ್ರಿಕೆಯ ಬಗ್ಗೆ ನನ್ನ ಅಭಿಪ್ರಾಯಗಳೇ ಬೇರೆಯಾಗಿವೆ. ಈ ಸಮಯದಲ್ಲಿ ನನ್ನ ಅಭಿಮತವೇನೆಂಬದನ್ನು ನಿನಗೆ ಬರೆದು ಬಿಡುವೆನು. ನನಗೆ ಈ ನಿಸರ್ಗ ತತ್ವದಲ್ಲಿ ಎಷ್ಟು ವಿಶ್ವಾಸವಿದೆಯೋ ಅಷ್ಟೇ ಅಭಿಮಾನ ಮತ್ತು ನಂಬುಗೆ ಯಥಾರ್ಥ ತತ್ವದಲ್ಲಿಯೂ ಇದೆ. ಈ ಬರೀ ಮಾತುಗಳಲ್ಲಿ ಏನೂ ಅರ್ಥ ವಿಲ್ಲ. ಆದರೆ ಸಾಹಿತಿಗಳಲ್ಲಿ ಜಗಳಗಳುದ್ಭವಿಸಲು ಮಾತ್ರ ಕಾಣವಾಗಿವೆ. ಸಾಹಿತ್ಯದ ಬಗ್ಗೆ ಹೆಚ್ಚು ಚರ್ಚಿಸುವುದಾಗಲಿ, ಮೂಲ ತತ್ವಗಳ ಬಗ್ಗೆ ವಾದ ವಿವಾದಗಳಲ್ಲಿ ತೊಡಗುವದು ನನಗೆ ಸೇರುವದಿಲ್ಲ. ಈ ಬಗೆಯ ವಾದ ನಿರರ್ಥಕ. ನನ್ನ ಅಭಿಪ್ರಾಯವೇನಿದೆಯೆಂಬುದನ್ನು ನಿನಗೆ ತಿಳಿಸುವು ದಕ್ಕೆಂದು ಮೊದಲು ನಿನ್ನ ದೃಷ್ಟಿಕೋನವೇನೆಂಬುವುದನ್ನು ನೀನು ತಿಳಿಯುವುದು ಅಶಕ್ಯ. ನಿನ್ನನ್ನು ನನ್ನ ಮತಕ್ಕೆಳೆಯುವೆನೆಂದಾಗಲಿ ನೀನು ಭಾವಿಸ ಬಾರದು. ನನ್ನ ಮಾತುಗಳು ನಿನಗೆ ವಿರಸವಾಗಿ ಕಾಣಿಸಬಹುದು. ನನ್ನ

ಬರವಣಿಗೆಯ ರೀತಿಯೇ ಇದು. ಲಕ್ಷಣ ಅಲಂಕಾರಾದಿಗಳಿಂದ ಮನರಂಜಿಸು ವಂತೆ ಊಹೆ ಉತ್ಪ್ರೇಕ್ಷೆಗಳಿಂದ ಆಶ್ಚರ್ಯವನ್ನುಂಟುಮಾಡುವಂತೆ ಬರೆಯು ವುದು ನನಗೆ ಹೊಸದು. ಕಂಡದ್ದು ಕಂಡಹಾಗೆ ಬರೆಯುವ ರೀತಿ ನನ್ನದು. ಸರ್ವಸಾಮಾನ್ಯರೀತಿಯ ನನ್ನ ಶೈಲಿ ನಿನಗೆ ರುಚಿಸದಿರಬಹುದು. ಆದರೆ ನಾನೇನು ಮಾಡಲಿ? ನನ್ನ ಈ ಕಾಗದ ಬೆಳೆಯುತ್ತದೆ. ಈ ಬಗೆಯ ಪತ್ರಕ್ಕೆ ನೀನು ಬೇರೆ ಭಾವಿಸಬೇಡ. ನಕ್ಕು ಹಿಯ್ಯಾಳಿಸಬೇಡ. ಈ ಕಾಗ ದವನ್ನು ನೀನು ಹೊರಗಡೆ ಯಾವ ಮಿತ್ರರಿಗೂ ತೋರಿಸಬಾರದೆಂದು ನನ್ನ ವಿನಂತಿ. ನಮ್ಮ ಮಿತ್ರರಿಗೆ ತಿಳಿದರೆ ತಿಳಿಯಲಿ. ನನ್ನ ಒತ್ತಾಯವೇನೂ ಇಲ್ಲ. ಇದನ್ನು ನಮ್ಮ ಹಿರಿಯರಾದ ಝೋಲಾರವರು ನೋಡಿದರೆ ನೊಂದುಕೊಳ್ಳುವರೇನೋ? ಅವರಲ್ಲಿ ನನಗೆ ಗೌರವವಿದೆ. ವಿಶ್ವಾಸವಿದೆ. ಅವರ ಲೇಖನ, ಕೃತಿಗಳನ್ನು ಪೂಜ್ಯಭಾವನೆಯಿಂದ ಗೌರವಿಸುತ್ತೇನೆ. ಆದರೆ ನನ್ನ ಈ ವಿಲಕ್ಷಣ ಧೋರಣೆಯನ್ನವರು ತಿಳಿದು ನೊಂದುಕೊಳ್ಳುವ ರೇನೋ? ಆದರೆ ಮನಸ್ಸಿನ ನಿಜಾಂಶವನ್ನು ತಿಳಿಯಪಡಿಸುವುದು ನಿಜ ಸಾಹಿತಿಯ ಕರ್ತವ್ಯವಲ್ಲದೆ ಮತ್ತೇನು? ಅವರನ್ನು ನಾನೇ ಸಮಕ್ಷಮದಲ್ಲಿ ಕಂಡು ಕ್ಷಮೆ ಬೇಡುವೆನು.

ನಾವೆಲ್ಲರೂ, ಜೀವನದಲ್ಲಿ ಯಶಸ್ವಿಗಳಾಗಿ ನಿಲ್ಲುವ ಮಾರ್ಗವನ್ನು ಕಂಡುಕೊಂಡು ಮುಂದರಿಯಬೇಕೆಂಬುದು ನಿನಗೆ ತಿಳಿದ ಮಾತು. ನಾವು ಐವರೂ ಕೂಡಿ ಕೆಲಸಮಾಡಿದರೆ ಏನನ್ನು ಸಾಧಿಸಲಾರೆವು? ನಾವು ಹೊಸ ಹೊಸ ಯೋಜನೆಗಳಲ್ಲಿ ಮನಸ್ಸು ಹಾಕಬೇಕು. ಯುಕ್ತಿಯಿಂದ ಕೆಲಸ ನಡೆ ಸಬೇಕು. ಹಿಂದೆ ಯಾರೂ ಉಪಯೋಗಿಸದ ಹೊಸ ಮಾರ್ಗದತ್ತ ನಮ್ಮ ದೃಷ್ಟಿ ಹೊರಳಬೇಕು. ಆದರಲ್ಲಿ ನಮ್ಮ ಸ್ವಾರ್ಥ ಇರಬಾರದು. ಇದು ಸ್ವಯಂ ಪ್ರೇರಿತವಾದ ಮಾರ್ಗವೆಂದು ಓದುಗರಿಗೆ ತಿಳಿಯಬೇಕು. ಐದಾರು ತಿಂಗಳವರೆಗೆ ಕೆಲವೊಂದು ಪತ್ರಿಕೆಗಳಲ್ಲಿ ನಮ್ಮ ಬಗ್ಗೆ ಲೇಖನಗಳು .ನಮ್ಮ ಕೃತಿಗಳ ಬಗ್ಗೆ ಚರ್ಚೆಗಳೂ ನಮ್ಮ ಕಾರ್ಯಧ್ಯೇಯದ ಬಗ್ಗೆ ವಿಚಾರ ಪರಿ ಪ್ಲುತ ರಚನೆಗಳು ಕೆಲವು ವಿನೋದಪರ ಟೀಕೆಗಳೂ ಒಂದೇಸವನೇ ಬರಬೇಕು. ಹೀಗೆ ಮಾಡಿದಲ್ಲಿ ಜನರ ದೃಷ್ಟಿ ನಮ್ಮ ಚಟುವಟಿಕೆಗಳ ಕಡೆ ಹೊರಳುವದು.

ನಮ್ಮ ಇರುವಿಕೆ ಅವರಿಗೆ ಆಗ ತಿಳಿಯುವುದು. ಎಂದು ಈ ಕಾರ್ಯದಲ್ಲಿ ನಾವು ಸಮರ್ಥರಾಗುವೆವೋ ಅಂದೇ ನಮ್ಮ ಕೀರ್ತಿ ಬೆಳೆಯಿತೆಂದು ತಿಳಿಯಬಹುದು. ಇದರಿಂದ ಆ ಪತ್ರಿಕೆಯಲ್ಲಿ ನಮ್ಮೆಲ್ಲರಿಗೆ ಸ್ಥಾನ ದೊರೆಯುವುದು. ಜನರ ಬೇಡಿಕೆಗೆ ಮನ್ನಣೆಕೊಟ್ಟು ಪತ್ರಿಕಾಕರ್ತರು ನಮ್ಮನ್ನು ಗೌರವಿಸುವರು. ಆಗ ನಿಜವಾದ ಸಾಹಿತಿಗೂ ಪತ್ರಿಕೋದ್ಯಮಿಗೂ ಇರುವ ನಿಕಟ ಬಂಧುತ್ವವೇನೆಂಬುವುದು ತಿಳಿದು ಬರುವದು.

ಇದು ನಿನಗೆ ಸಮ್ಮತವೇ?

ನಿನ್ನವನೇ —**ಗಾಯ್**

— ೨೮ —

ಮೋಪಾಸಾನು ತನ್ನ ದೋಣಿ ಆಟವ ಸಂಗಡಿಗನಾದ ಲಾಮೋಸಿಗೆ ಬರೆದ ಪತ್ರವಿದುಃ—

**ಮಿತ್ರ ಲಾಮೋ**

ಕವನಗಳನ್ನು ಹಳಿಯುವ ಗುಂಪನ್ನು ಕಂಡರೆ ನನಗೇಕೋ ಸೇರುವುದಿಲ್ಲ. ಅಂಥವರು ವಿಲಕ್ಷಣವ್ಯಕ್ತಿಗಳೆಂದು ನನ್ನ ಭಾವನೆ. ಅಂಥವರ ಸಹವಾಸದಲ್ಲಿ ನಿನ್ನ ಯೋಚನಾ ಲಹರಿ ಹುರುಪುಗೊಳ್ಳುತ್ತದೆ. ಯಥಾರ್ಥವಾದವನ್ನೇ ನಾನು ಕಾದಂಬರಿ ಮತ್ತು ನಾಟಕಗಳಲ್ಲಿ ಉಪಯೋಗಿಸುತ್ತಿರುವೆನು. ಈ ನನ್ನ ಸತ್ಯದ ಚಿತ್ರಗಳು ಜನರನ್ನು ಸುಧಾರಿಸುವವೆಂದು ನನ್ನ ನಂಬಿಕೆ. ಅವುಗಳನ್ನು ವಿವರಿಸಿ, ಅದರ ಪರಿಣಾಮವಾಗಿ ಅವರ ತಪ್ಪುಗಳನ್ನು ಅವರೆದುರು ಎತ್ತಿ ಹಿಡಿಯುವದರಿಂದ ಸಾಹಿತ್ಯವು ಜನರಿಗೆ ಸರಿಯಾದ ಉಪಕಾರವನ್ನು ಮಾಡೀತೆಂದು ಅದರಿಂದ ಜನಾಂಗಕ್ಕೆ ನಿಜವಾದ ಸೇವೆ ಸಲ್ಲೀತೆಂದು ಭಾವಿಸಿರುವೆವು. ಇದರಿಂದ ಏನಾಗುವುದೆಂಬುವುದನ್ನು ನೀನು ನಿರೀಕ್ಷಿಸುತ್ತಿರು. ಅಂದಲ್ಲಿ ನಿನಗೂ ಸರಿಯಾದ ಸಾಮಗ್ರಿ ದೊರೆಯುವುದೆಂದು ನನ್ನ ಭಾವನೆ. ನಿನ್ನ ನಿತ್ಯ ಜೀವನದಲ್ಲಿ ನೀನುಸಹ ಅನೇಕ ಚಿತ್ರಗಳನ್ನು ಸನ್ನಿವೇಶಗಳನ್ನು ಕಾಣುತ್ತಿರಬಹುದು. ನನ್ನ ಚಿತ್ರಣಗಳು ನಿನಗೆ

ರುಚಿಸುವವೇ ?. ನಾನು ಚಿತ್ರಿಸುತ್ತಿರುವದು ಯಥಾರ್ಥವೋ ಅಲ್ಲವೋ ಎಂಬುದನ್ನು ನಿನಗೆ ಆಗ ಮನವಟ್ಟಾಗುವುದು. ಪತ್ರಬರೆ.

—ಗಾಯ್

- ೨೯ -

(ಕಾರ್ಪೇತಿಯನ್ನನು ಆಗಿನಕಾಲದ ಹೆಸರಾದ ಪ್ರಕಟನೆಕಾರ. ಇವನೇ ಫ್ಲಾಬೇರನ, ಮೋಪಾಸಾನ ಮತ್ತು ಇತರ ಸಾಹಿತಿಗಳ ಪುಸ್ತಕಗಳನ್ನು ಪ್ರಕಟಿಸಿದವನು. ಮೋಪಾಸಾ ಇವನಿಗೆ ಬರೆದ ಒಂದು ಪತ್ರ.

**''ಪ್ರಿಯ ಕಾರ್ಪೇತಿಯನ್ನರೇ,**

ಈ ಬೇಸಿಗೆಯಲ್ಲಿ ನೀವು ನನ್ನೊಂದಿಗೆ ಒಂದು ದಿನ ಕಳೆಯುವೆನೆಂದು ಮೊದಲೇ ಮಾತು ಕೊಟ್ಟಿರುವಿರಿ. ಎಲ್ಲಿ ಹೇಗೆ ಎಂಬುದನ್ನು ನಿರ್ಧರಿಸಲು ನೀವೇ ಸಮರ್ಥರು. ನೀವು ನನ್ನ ಅತಿಥಿಗಳಾಗಿರಬೇಕು. ಇದುವೇ ನನ ಬೇಡಿಕೆ. ಬರುವ ಭಾನುವಾರ ಬೇಸಾನದಲ್ಲಿ ಜನಸಂದಣಿ ಹೆಚ್ಚಿರುವುದು ವಿನೋದಕ್ಕೆಂದು ಜನರು ಆ ಪ್ರದೇಶಕ್ಕೆ ಬರುವರು. ತಮಾಷೆಗೆ ಇದೊಂದು ಒಳ್ಳೇ ಪ್ರದೇಶ. ಬೇಸಾನದ ಜನರು ಬಲು ವಿನೋದಪ್ರಿಯರಂತೆ. ಅವರ ಕುಚೇಷ್ಟೆ ಬಲು ಆನಂದಮಯವಂತೆ ಅಂದು ನನ್ನೊಂದಿಗೆ ಹೆನ್ರಿ, ಸೀಯರ್ ಮತ್ತು ಹುಸ್ಸಿಮನ್ನರೂ ಇರುವರು. ದೋಣಿ ಆಟದಲ್ಲಿ ಹೆಸರಾಂತ ಹೆಣ್ಣು ಗಂಡುಗಳೂ ನನ್ನ ಪರಿಚಿತರು ಅನೇಕರೂ ಬರುವರು. ಆಗ ನನ್ನ ಸಾಹಿತ್ಯ ಮಿತ್ರರಾಗಲಿ ನಿಮ್ಮನ್ನು ಪುಸ್ತಕ ಪ್ರಕಟನೆಗಾಗಿ ಕಾಡುವೆವೆಂದು ನೀವು ಚಿಂತೆಗೊಳಗಾಗುವದು ಅನಾವಶ್ಯಕ ಹೀಗೆ ನಾನು ನಿಮಗೆ ಸ್ಪಷ್ಟವಾಗಿ ಬರೆದಿರುವೆನೆಂದು ಬೇರೆ ಭಾವಿಸಬಾರದು. ಆಮಂತ್ರಿಸಲಿಕ್ಕೆ ನಾವು ನಿಮ್ಮಮೇಲೆ ಯಾವಬಗೆಯ ಬಲೆಯನ್ನು ಬೀಸುತ್ತಿಲ್ಲವೆಂಬುದನ್ನು ವಿಶದಪಡಿಸುತ್ತೇನೆ. ದಯವಿಟು ನಮ್ಮ ಈ ಪಿಕಿನಿಕ್ ಪಾರ್ಟಿಯಲ್ಲಿ ತಾವು ಭಾಗವಹಿಸಬೇಕೆಂದು ನನ್ನ ಬೇಡಿಕೆ. ತಾವು ಮುಂಜಾನೆ ಬೇಗಬರಬೇಕು. ಹಾಗೆ ಮುಂಜಾನೆ ಬರಲು ಅವಸರದ ಕೆಲಸವಿದ್ದಲ್ಲಿ, ಮಧ್ಯಾನ್ಹದಲ್ಲಿಯಾದರೂ ನಮಗೆ ನಿಮ್ಮ ಸಹವಾಸದ ಲಾಭಕೊಡಬೇಕೆಂದು ಕೋರುತ್ತೇನೆ. ನದಿಯಲ್ಲಿ ಡೋಣಿನಡೆ

ಸುವ ಶಕ್ತಿಯನ್ನೂ ಹಳ್ಳಿಯ ಜನರಿಗೆ ಕೊಂಚ ತೋರಿಸುವ. ಆದಿತ್ಯವಾರ ತಪ್ಪದೇ ಬನ್ನಿ.

ನಿಮ್ಮ —ಗಾಯ್"

— ೩೦ —

(ಗಾಯ್‌ನು 'ರೋವರ್-ಸಿಸಿಲೀ' ಪ್ರಾಂತಗಳ ಪ್ರವಾಸ ಮುಗಿಸಿಕೊಂಡು ೧೮೮೮ರ ಜುಲೈ ೭ನೇ ದಿನಾಂಕ ಪ್ಯಾರಿಸಕ್ಕೆ ಬಂದನು. ಆಗ ತಾಯಿಯಾದ ಲಾರೀಳಿಗೆ ಬರೆದ ಪತ್ರ.)

ಪ್ರೀಯ ತಾಯೇ,

ನಿನಗೆ ಹೊಸತೇನು ಬರೆಯಲಿ ? ನನ್ನ ಪ್ರವಾಸ ಇದೇ ತಾನೇ ಮುಗಿಯಿತು. ಪ್ರವಾಸದಲ್ಲಿ ಬರೆಯಲು ನನಗೆ ಉತ್ಸಾಹವೇ ಇರಲಿಲ್ಲ. ಇಲ್ಲಿಗೆ ಬಂದಮೇಲೆ ನಾನು 'ಬೆಲ್ ಅಮಿ' ಪುಸ್ತಕದ ಮಾರಾಟದ ಬಗ್ಗೆ ಹೆಚ್ಚು ಆಸಕ್ತಿ ವಹಿಸುತ್ತಿರುವೆನು. ಈಗ ಅದು ಇಪ್ಪತ್ತೇಳನೆಯ ಸಲ ಪ್ರಕಟವಾಗುತ್ತಿದೆ. ಆದರೆ ಹೆಚ್ಚುಪ್ರತಿಗಳು ಮಾರಾಟವಾಗಿಲ್ಲೆಂಬುದೇ ನನ್ನನ್ನು ವೇಧಿಸುತ್ತಲಿದೆ. ನಾನು ಇದೇ ಶುಕ್ರವಾರ ಏತ್ರೇಪ್ರದೇಶಕ್ಕೆ ಹೊರಡುತ್ತೇನೆ. ಅಲ್ಲಿ ನಾಲ್ಕಾರು ದಿನಗಳು ಮಾತ್ರ ಇರುವೆನು. ಅನಂತರ ಛಾಟೇಲ್ ಗಿಯೋನ್‌ಗೆ ವಿಶ್ರಾಂತಿಗಾಗಿ ಹೊರಡುತ್ತೇನೆ. ಅಲ್ಲಿ ೨೫ ದಿನಗಳವರೆಗೆ ಇರಬೇಕೆಂದು ನಿಶ್ಚಯಿಸಿರುವೆನು. ನೀವೂ ನನ್ನೊಂದಿಗೆ ಬರಬೇಕೆಂದು ಬಯಸುತ್ತೇನೆ. ನೀವು ಬರುವಿರೆಂದು ಭರವಸೆಯನ್ನಿತ್ತರೆ ಬೇರೊಂದು ಸಣ್ಣ ಮನೆಯನ್ನು ಹಿಡಿಯುವೆನು. ಫ್ರಾಂಕೋ ಸಹಿತ ನನ್ನೊಂದಿಗೆ ಬರುವನು.

ನಿಮ್ಮ ಮಗ— ಗಾಯ್

— ೩೧ —

(೧೮೮೬ ರಲ್ಲಿ ಅಟೆಂಬೀ ಎಂಬ ಆರೋಗ್ಯಧಾಮದಲ್ಲಿ ಮೋಪಾಸಾ ವಿಶ್ರಾಂತಿ ಪಡೆಯುತ್ತಿರುವಾಗ ತನ್ನ ಆಪ್ತೀಯ ಮಿತ್ರಳಾದ ಹಾರ್ಮಿತ್ ಲೀಕೋಮೇ ಎಂಬವಳಿಗೆ ಬರೆದ ಪತ್ರ.)

ಮಿತ್ರಳೇ,

ನನ್ನ ಕಾದಂಬರಿ "ಮಾಂಟ ಓರಿಯೋ" ಮುಗಿಯುತ್ತ ಬಂದಿದೆ. ಇಲ್ಲಿಯ ಶ್ರೀಮಂತ ಜನರನೇಕರ ಪರಿಚಯ ನನಗೆ ಆಗಿದೆ. ಅವರ ಟೊಳ್ಳು ಜೀವನದ ವಿವರ ನನಗೆ ತಿಳಿಯತೊಡಗಿದೆ. ಇಲ್ಲಿಯ ನನ್ನ ಅನುಭವದಿಂದ ನಾನು ಶ್ರೀಮಂತರ ನಡೆನುಡಿಗಳ ರೀತಿಯನ್ನು ಅರಿತಿರುವೆನು. ಅದು ದೇವರಿರುವನೆಂದ ತತ್ವಕ್ಕಿಂತಲೂ ಮಿಗಿಲಾದುದೆಂದು ನನ್ನ ಮನದ ನಂಬಿಕೆ.

ಯಾವನು ಸುಖಪಡಬೇಕೆಂದು ಬಯಸುವನೋ, ಯಾವನು ಪ್ರಗತಿ ಪಥದಲ್ಲಿ ಮುಂದರಿಯಬೇಕೆಂದು ಹವಣಿಸುವನೋ, ಯಾವನು ತನ್ನ ಆತ್ಮ ಪ್ರತಿಷ್ಟೆ ಬೆಳೆದು, ತಾನೊಬ್ಬ ಉಪನ್ಯಾಸಕಾರನಾಗಲು ಬಯಸುವನೋ, ಜಗತ್ತಿನಲ್ಲಿಯ ಮಾನವಕೋಟಿಯ ಆಶೆ-ಆಕಾ-ಕ್ಷೆಗಳನ್ನು ತಿಳಿಯಲು ಮಾನವನು ಯತ್ನಿಸುವನೋ, ಎಲ್ಲ ಮೂಢನಂಬಿಕೆ, ಆಚಾರ ವಿಚಾರಗಳಲ್ಲಿ ಬೀಳಬಾರದೆಂದು ಯಾವನು ಬಯಸುವನೋ, ಅಂಥವನು ಸಮಾಜದಿಂದ ದೂರಿರುವದು ಲೇಸು. ಅದರ ನಡುವೆ ನಿಂತರೆ ಅವನನ್ನು ಮಾಯೆ ಮುಸುಕುವದು. ಅವನು ಸ್ವತಂತ್ರರೀತಿಯಲ್ಲಿ ಯೋಚಿಸಲಾರ. ಸಮಾಜದ ಮೋಹ ಜಾಲದಲ್ಲಿ ಬಿದ್ದು ಮೋಸಹೋಗುವನು. ಹೀಗಿರಬೇಕೆಂದು ನಿನ್ನ ಮಗನಿಗೆ ಹೇಳು. ಮರೆಯಬೇಡ.

ಮತ್ತೊಂದು ಮಾತು: ನಾನು ಬರೆಯುತ್ತಿರುವ ಈ ಕಾಂದಬರಿಯಲ್ಲಿ ಅಪ್ರತಿಮ ಕಾವ್ಯಲಕ್ಷಣವನ್ನು ನೀನು ಕಾಣುವೆ. ಪ್ರೇಮದ ನಿರೂಪಣೆ ಒಂದು ವೈವಿಧ್ಯತೆಯನ್ನು ತಾಳಿದೆ. ಈ ಬಗೆಯ ಉಚ್ಚಧ್ಯೇಯದ ಕಾವ್ಯ ಲಕ್ಷಣಮಯವಾದ ಗದ್ಯ ಕೃತಿಯನ್ನು ಬರೆಯುವದು ಇದೇ ಮೊದಲು. ಈ ಬಗೆಯ ಹಳೆಯ, ಸಾಂಪ್ರದಾಯಬದ್ಧ ಭಾವನೆಗಳು ನನ್ನ ಲೇಖನದಿಂದ ಬರುವದು ಹೊಸತು. ಇದು ನನ್ನನ್ನು ಪೂರ್ಣ ಪರಿವರ್ತನಗೊಳಿಸುವದೆಂಬ ಭಯ ನನ್ನನ್ನು ಆವರಿಸುತ್ತಿದೆ. ಈ ಅನುಭವ ನನಗೆ ತೀರ ಹೊಸತು. ಇರಲಿ ನೋಡುವ. ನಾಳೋಲೆ ಬರೆಯುವೆ ಮಾ.

ನಿಮ್ಮ —**ಗಾಯ್**"

– ೩೨ –

[೧೮೮೬ ರಲ್ಲಿ ಗಾಯನು ಎರಡು ಸಲ ಇಂಗ್ಲಂಡಕ್ಕೆ ಹೋಗಿದ್ದ. ಅಲ್ಲಿ ಶ್ರೀಮಂತ ರೋಥಚೈಲ್ಡರಲ್ಲಿ ಉಳಿದಿದ್ದ. ಇಂಗ್ಲಂಡದ ಜನರ ಬಗ್ಗೆ ಮೋಪಾಸಾನ ಅಭಿಪ್ರಾಯುಗಳನ್ನು ತಿಳಿಸುವ ಪತ್ರ ಇದು. ಮೋಪಾಸಾನು ತನ್ನ ಪರಮ ಮಿತ್ರಳಾದ ಮದಾಂ ಸ್ಟ್ರಾಸ್‌ಳಿಗೆ ಬರೆದ ಪತ್ರದಲ್ಲಿ ಹತ್ತಿರವೇ ಇದ್ದ ಈ ಎರಡು ದೇಶಗಳ ಸಮಾಜ ಸ್ಥಿತಿಯನ್ನು ಜನರ ರೀತಿ ನೀತಿಗಳನ್ನು ತಿಳಿಸುವ ಪತ್ರ ಇದು.]

**ಪ್ರಿಯ ಮದಾಂ ಸ್ಟ್ರಾಸರವರೇ,**

ನಾನು ಇಂಗ್ಲಂಡಿಗೆ ಬಂದು ಹದಿನೈದು ದಿನಗಳಾದವು. ಶ್ರೀಮಂತ ರೋಥ ಛೈಲ್ಡರ ಮನೆಯಲ್ಲಿ ಉಳಿದಿರುವೆನು. ಇಲ್ಲಿಗೆ ಅನೇಕ ಶ್ರೀಮಂತ ವ್ಯಕ್ತಿಗಳು ಬರುತ್ತಿರುವರು. ನನ್ನ ಮಿತ್ರರು ಈ ನಗರದಲ್ಲಿ ಪ್ರಸಿದ್ಧ ಪುರುಷರು. ಇವರ ಮನೆಗೆ ದಿನವೂ ರಾತ್ರಿಯ ಊಟಕ್ಕೆ ಈ ನಗರದ ಪ್ರಸಿದ್ಧ ವ್ಯಕ್ತಿಗಳು, ರಾಜಮನೆತನದವರೂ ಊಟಕ್ಕೆ ಬರುತ್ತಿರುವರು. ಇವರಲ್ಲಿ ಮುಂದೆ ರಾಜನಾಗಲಿರುವ ಪ್ರಿನ್ಸ ಆಫ ವೇಲ್ಸರವರೂ ಬಂದಿದ್ದರು. ಇಂತಹ ಶ್ರೀಮಂತ ವ್ಯಕ್ತಿಗಳ ಪರಿಚಯ ನನಗೆ ಆದುದು ನನ್ನ ಸುದೈವವೇ ಸರಿ. ಇಲ್ಲಿಯ ಗಂಡಸರು ಸುಂದರರು. ಆದರೆ ಅವರಿಂದ ನನಗೇನು ಪ್ರಯೋಜನ? ಇಲ್ಲಿಯ ಸ್ತ್ರೀಯರು ನಮ್ಮ ಫ್ರಾನ್ಸದ ಸ್ತ್ರೀಯರಷ್ಟು ಸುಂದರಿಯರಿಲ್ಲ. ಇವರಲ್ಲಿರಬೇಕಾದ ಆಕರ್ಷಣೆ ಇಲ್ಲ. ಫ್ರಾನ್ಸದ ಸ್ತ್ರೀಯರಲ್ಲಿ ನಾವು ಕಾಣುವ ಕುಶಲತೆ, ಜಾಣತನ ಇವರಲ್ಲಿಲ್ಲ. ಇಲ್ಲಿಯ ಸ್ತ್ರೀಯರು ಕೂಡ ಅಹಂಕಾರದ ಗೊಂಬೆಗಳೆಂದು ಈ ಜನರು ಹೇಳುವರು. ಆದರೆ ಅಹಂಕಾರದಿಂದ ನನಗೇನು ಪ್ರಯೋಜನ? ನನಗೇಕೋ ಇಲ್ಲಿಯ ಜೀವನದ ರೀತಿ ರುಚಿಸದಂತಾಗಿದೆ. ಈ ಜನರ ಡಾಂಭಿಕ ವರ್ತನೆ ನನಗೆ ಬೇಸರವನ್ನುಂಟುಮಾಡಿದೆ. ಇಂತಹ ಡಾಂಭಿಕ ನಡುವಳಿಕೆ ಮಾನವ ಜನಾಂಗಕ್ಕೆ ಸಹಜವೆನಿಸುವದಿಲ್ಲ. ಇವರ ರೀತಿ ನಡಾವಳಿಗಳ ಬಗ್ಗೆ ನನಗಾಗಲೇ ನನ್ನ ಮಿತ್ರರೂ ಎಚ್ಚರವನ್ನಿತ್ತಿದ್ದರು. ಫ್ರಾನ್ಸದಿಂದ ಬಂದಿರುವ ನನಗೆ ಈ ಜನರ ಭಾಷೆ ತಿಳಿಯದು. ಹೆನ್ರಿ ಜೇಮ್ಸರು ನನ್ನ ಹತ್ತಿರವೇ ಇದ್ದು ನೆರವನ್ನು ನೀಡುತ್ತಿರುವರು. ಹೊರನಾಡಿಗೆ ಬಂದಿರುವ ನಾನು ಸಣ್ಣ ಹುಡುಗನಂತೆ

ನಮ್ರತೆಯಿಂದ ನಡೆದುಕೊಳ್ಳಬೇಕಾಗಿದೆ. ಇವರ ನಡುವೆ ನಾನು ನಡೆದು ಕೊಳ್ಳುವಾಗ ನನಗೇಕೋ ಭಯವೆನಿಸುತ್ತದೆ. ನನ್ನ ಸಹಜ ಧೈರ್ಯ ನನ್ನ ಕೈ ಬಿಡುತ್ತದೆ. ನನ್ನ ಬಗ್ಗೆ ಈ ಜನರೇನಾದರೂ ಆಡಿಕೊಳ್ಳಲಿ. ಈ ಹೊಸ ವಾತಾವರಣದಲ್ಲಿ ನನ್ನ ತುಂಟತನವನ್ನು ಪ್ರದರ್ಶಿಸುವ ಧೈರ್ಯ ನನಗಾಗಲಿಲ್ಲ? ಆದರೆ ನನಗೇನಾಗಬೇಕಾಗಿದೆ ಇವರ ಈ ಟೊಳ್ಳು ಮಾತುಗಳಿಂದ? ನನ್ನವರಿಗೆ ತಿಳಿದಿದೆ ನಾನು ಎಂತಹನೆಂಬುವುದು. ನಿಮಗೆ ಈ ನನ್ನ ಪತ್ರ ಬೇಸರವೆನಿಸುವದೆ? ಮಾಡಲೇನು. ಸಮಕ್ಷಮ ಹೆಚ್ಚಿನ ವಿವರಗಳು.

ನಿಮ್ಮ ಮಿತ್ರ —**ಗಾಯ್**

— ೩೩ —

[ ೧೮೮೭ ರ ಅಕ್ಟೋಬರದಲ್ಲಿ ಮೋಪಾಸಾನು ತನ್ನ ಪ್ರಸಿದ್ಧ ಕಾಬಂದರಿ 'ಪೀರೇ ಜೀನ್' ಬರೆದು ಮುಗಿಸಿದ. ಆ ನಂತರ ಇವನು ಕೆಲ ಮಿತ್ರರೊಂದಿಗೆ ಅಫ್ರಿಕಾಕ್ಕೆ ವಿಶ್ರಾಂತಿಗೆಂದು ಹೊರಟುಹೋದ. ಅಲ್ಜೀರಿಯಾದಲ್ಲಿ ಜನೆವರಿ ೧೮೮೮ ರ ವರೆಗೆ ಇದ್ದ ಸಮಯದಲ್ಲಿ ತನ್ನ ಸ್ನೇಹಿತಳಾದ ಮದಾಂ ಸ್ಟ್ರಾಸ್‌ಳಿಗೆ ಬರೆದ ಪತ್ರದ ಕೆಲ ಅಂಶಗಳಿವು.]

**ಮಿತ್ರಳೇ,**

ಇಲ್ಲಿ ನಮ್ಮ ಪ್ರವಾಸದಲ್ಲಿ ನಿನ್ನನ್ನೇ ಸದಾ ನೆನೆಯುತ್ತಲಿದ್ದೇನೆ. ಕಾವ್ಯ ಸ್ಫೂರ್ತಿಗೆ ಬರಹಗಾರನು ತನ್ನ ಸುತ್ತಲಿನಲ್ಲಿ ಲೀನವಾಗುವುದು ತೀರ ಅವಶ್ಯಕ. ಈ ನಿಷ್ಠೆಯೇ ಎಲ್ಲ ಕಾರ್ಯ ಸಾಧನೆಗೆ ಕಾರಣವಾಗುವುದೆಂಬುವುದನ್ನು ಮರೆಯಬೇಡ. ಅಂಜಿಕೆ ಇಲ್ಲದೆ ರೂಪಿಸುವ ಬರಹಕ್ಕೆ ತಾತ್ಕಾಲಿಕವಾಗಿ ಮನ್ನಣೆ ದೊರೆಯದಿದ್ದರೂ, ಅಂತಹ ಬರವಣಿಗೆ ಕಾಲಾಂತರದಲ್ಲಿ ಮನ್ನಣೆ ಪಡೆಯಲು ಪೂರ್ಣ ಅರ್ಹತೆಯುಳ್ಳದ್ದೆಂದು ನನ್ನ ಮನವರಿಕೆ. ಈ ಬಿಚ್ಚುಮಾತಿನ ಎಚ್ಚರದ ನುಡಿ ಜನರನ್ನು ಕಣ್ತೆರೆಯಿಸುವದು. ಇಂತಹ ಬರವಣಿಗೆ ಎಲ್ಲರಿಗೂ ರುಚಿಸದಿದ್ದರೂ ಕೆಲವರಿಗಾದರೂ ಅದರ ಗೂಢಾರ್ಥ ತಿಳಿಯಲೇಬೇಕಲ್ಲವೆ? ನನ್ನ ಕಾದಂಬರಿ 'ಪೀರೇ ಜೀನ್'ದಲ್ಲಿ ಇಂತಹ ಎಚ್ಚರದ ಚುಚ್ಚು ಮಾತುಗಳು ಕತೆಯ ತುಂಬಾ ಹರಡಿಕೊಂಡಿವೆ. ಇವು

ಅನೇಕರ ಕೋಪವನ್ನು ಕೆರಳಿಸಬಹುದು. ಇದು ೧೮೮೮ ರ ಜನೇವರಿಯಲ್ಲಿ
ಪುಸ್ತಕರೂಪದಲ್ಲಿ ಬರಬಹುದು. (Review novel) ಎಂಬ ಪತ್ರಿಕೆ
ಯಲ್ಲಿ ಮೊದಲು ೧೮೮೭ ರ ಡಿಸೆಂಬರದಲ್ಲಿ ಪ್ರಕಟಹೊಂದುವುದು. ಆ
ನಂತರ ೧೮೮೮ ಜನೆವರಿಯಲ್ಲಿ ಪುಸ್ತಕವು ಹೊರಬರುವದು. ಇದರಿಂದ ಈ
ಪುಸ್ತಕವು ಹೆಚ್ಚು ಮಾರಾಟವಾಗದಿರಬಹುದು. ಚಿಂತೆ ಇಲ್ಲ. ಮತ್ತೆ
ಬರೆಯುವೆ. ವಿಶ್ವಾಸವಿರಲಿ.

ನಿನ್ನ ವಿಶ್ವಾಸಿಗ —ಗಾಯ್

— ೩೪ —

[ ೧೮೮೮ ರ ಜನೆವರಿಯಲ್ಲಿ ಮೋಪಾಸಾನ ಪ್ರಖ್ಯಾತ ಕಾದಂಬರಿ "ಪೀರೇ
ಜೀನ್" ಪುಸ್ತಕ ರೂಪದಲ್ಲಿ ಹೊರಬಂದ ನಂತರ ಇದೇ ಬಗೆಯ ಕಥಾವಸ್ತುವನ್ನೊ
ಳಗೊಂಡ ಕಾದಂಬರಿಯನ್ನು ಬರೆದ ಲೇಖಕನು ಮೋಪಾಸಾನನ್ನು ಎಚ್ಚರಿಸಿ ವಿಸ್ಮಯ
ಗೊಳಿಸಿ, ತನ್ನ ಆ ಹೊಸ ಕಾದಂಬರಿಗೆ ಮುನ್ನುಡಿಯನ್ನು ಬರೆಯಬೇಕೆಂದು ಕೇಳಿ
ಕೊಂಡ. ತರುಣ ಬರಹಗಾರನಾದ ಇವನ ಬೇಡಿಕೆಯನ್ನು ಪೂರೈಸಿ ಬರೆದ ಪತ್ರ
ವಿದು. ]

ತರುಣ ಬರಹಗಾರ ಮಿತ್ರನೇ,

ಒಂದೇ ರೀತಿಯ ಸನ್ನಿವೇಶ ಒಂದೇ ಸಮಯದಲ್ಲಿ ನಮ್ಮಿಬ್ಬರ ದೃಷ್ಟಿ
ಯನ್ನು ಸೆಳೆದುದು ಆಶ್ಚರ್ಯವಲ್ಲ. ಅದೇ ವಿಷಯ ನಮ್ಮಿಬ್ಬರ ಕಾದಂಬರಿ
ಗಳ ಕಥಾ-ವಸ್ತುವಾಗಿರುವದೂ ಸೋಜಿಗದ ಮಾತಲ್ಲ. ಆದರೆ ನನ್ನ
ಕಾದಂಬರಿ ಪ್ರಥಮವಾಗಿ ಪ್ರಕಟವಾದುದು ಮಾತ್ರ ವಿಷಾದದ ವಿಷಯ.
ಇದರ ಪರಿಣಾಮ ನಿಮ್ಮ ಕಾದಂಬರಿಯ ಮೇಲೆ ಹೇಗಾಗುವದೋ ಎಂಬು
ದನ್ನು ನಾನು ಊಹಿಸಲಾರೆ. ನನ್ನ ಪುಸ್ತಕ ಮೊದಲಿಗೇ ಹೊರ ಬಂದುದು
ದುರ್ದೈವವೆನ್ನಬೇಕು. ಆದರೆ ನಿಮ್ಮ ಪುಸ್ತಕದ ಚೆಲುವು, ಉತ್ಕೃಷ್ಟತೆ,
ನಾವೀನ್ಯತೆ, ಅಚ್ಚಳಿಯದ ಕೀರ್ತಿಯನ್ನು ನಿಮಗೆ ತಂದೊದಗಿಸುವದರಲ್ಲಿ
ಸಂಶಯವಿಲ್ಲ. ನೀವು 'ಸ್ಟಿಫಾನೇ' ಬರೆಯುವಿರೆಂದು ನಾನು ನನ್ನ
'ಪಿರೇಜೀನ್' ಬರೆಯುವಾಗ ಕ್ಷಣಮಾತ್ರ ನೆನೆಯಲಿಲ್ಲ. ಈ ಸಂಘಟನೆ

108007

ಯಿಂದ ಎಲ್ಲರ ನಡೆನುಡಿಗಳನ್ನು ನೋಡಿಕೊಳ್ಳುವ ಬೇರೊಂದು ಶಕ್ತಿ ಇದೆ ಎಂಬುವ ಸತ್ಯದ ಮಾತು ನಮ್ಮೆದುರು ಬಂದು ನಿಲ್ಲುತ್ತದೆ.

ನನ್ನ ಕಾದಂಬರಿಗೆ ಒಂದು ದಿನಪತ್ರಿಕೆಯಲ್ಲಿ ಪ್ರಕಟವಾದ ವರದಿಯೇ ಹಿನ್ನೆಲೆ. ಅದೇ ವಿಷಯ ಅದೇ ನಿಮ್ಮ ನೋಟವನ್ನು ಆಕರ್ಷಿಸಿರಬಹುದು. ಆ ವಿಚಿತ್ರ ವರದಿಯು ನಮ್ಮಿಬ್ಬರ ಮನಸ್ಸಿನ ಮೇಲೆ ಒಂದೇ ಬಗೆಯ ಭಾವನೆಯನ್ನುಂಟುಮಾಡಿ, ಅದೇ ಕಥಾವಸ್ತುವನ್ನು ಕಾದಂಬರಿಗಾಗಿ ಉಪಯೋಗಿಸುವ ಮನೋನಿಶ್ಚಯವನ್ನೊದಗಿಸಿದುದು ಸಹಜವೆಂದು ಹೇಳಬಲ್ಲೆ. ಇದರಲ್ಲಿ ಯಾವ ಬಗೆಯ ನೋವು, ತಾಪ, ಮನಸ್ತಾಪಗಳಿಗೆ ಕಾರಣವಿಲ್ಲ. ಮಾನವನ ಸಹಜವಾದ ಹಕ್ಕು ಬಾಧ್ಯತೆಯನ್ನು, ಸ್ವತಂತ್ರವಾಗಿ ಯೋಚಿಸುವ ಶಕ್ತಿಯನ್ನು ತಡೆಯಲು ಯಾರಿಗೆ ತಾನೇ ಸಾಧ್ಯ ? ನಾನು ಇದನ್ನು ಬೇಗ ಪ್ರಕಟಿಸಿದೆ! ನೀವು ಕೊಂಚ ತಡಮಾಡಿರಿ, ಇಷ್ಟೇ ಭೇದ.

ನೀವು ನೊಂದುಕೊಳ್ಳುವುದು ಬೇಡ. ಗಾಬರಿಗೂ ಕಾರಣವಿಲ್ಲ. ನಿಮ್ಮಲ್ಲಿ ನನಗೆ ಪೂರ್ಣ ವಿಶ್ವಾಸವಿದೆ; ನನ್ನ ಸಹಾನುಭೂತಿ ಇದೆ. ನೀವು ನಿಮ್ಮ ಈ ಪ್ರಥಮ ಕಾದಂಬರಿಯನ್ನು ಇಷ್ಟು ಸುಂದರವಾಗಿ ಬರೆದು ಮುಗಿಸಿದುದಕ್ಕೆ ನನ್ನ ಧನ್ಯವಾದಗಳು. ನಿಮಗೆ ಗೆಲುವು ದೊರೆಯಲಿ. ನಿಮ್ಮ ಕೀರ್ತಿ ಬೆಳೆಯಲಿ.

ಬೇಕೆನಿಸಿದರೆ, ಈ ನನ್ನ ಪತ್ರವನ್ನೇ ತಾವು ನಿಮ್ಮ ಕಾದಂಬರಿಗೆ ಮುನ್ನುಡಿಯನ್ನಾಗಿ ಉಪಯೋಗಿಸಿಕೊಳ್ಳಬಹುದು. ನಮಸ್ಕಾರ.

ನಿಮ್ಮವನೇ —**ಗಾಯ್**

— ೩೫ —

[ ೧೮೮೮ ರಲ್ಲಿ "ಪೀರೇ ಜೀನ್" ಎಂಬ ಕಾದಂಬರಿ ಪ್ರಕಟವಾಯಿತು. ಈ ಸಮಯದಲ್ಲಿ ಮೋಪಾಸಾ ಮತ್ತೇನನ್ನೂ ಬರೆಯಲಿಲ್ಲ. ಈ ಸಮಯದಲ್ಲಿ ಅವನ ಕೃತಿಗಳು ಸಾಮಾನ್ಯ ರೀತಿಯದಾಗಿದ್ದವು. ಲೇಖನಗಳನ್ನು ಅವನು ಬರೆಯಲೇ ಇಲ್ಲ. ಕೇವಲ ಆರು ಕತೆಗಳನ್ನು ಮಾತ್ರ ಬರೆದು ಮುಗಿಸಿದ ಈ ಸಂಧಿ ವೇಳೆಯಲ್ಲಿ

ಅವನ ಮನಸ್ಸು ಹೇಗಿತ್ತೆಂಬುದನ್ನು ತಾಯಿಗೆ ಬರೆದ ಪತ್ರ ಇದು. ಇದಲ್ಲದೆ ಕಾದಂಬರಿ ಪ್ರಪಂಚದಿಂದ ಮೋಪಾಸಾ ನಾಟಕಸಾಹಿತ್ಯ ರಚಿಸಿದ ರೀತಿಯನ್ನು ವಿವರಿಸುತ್ತದೆ.]

ನನ್ನ 'ಪೀರೇ ಜೀನ್' ಮುಗಿಯಿತು. ಬೇಗ ಪ್ರಕಟವಾಗುವದು. ಈ ವರುಷ ನಾನು ಹೆಚ್ಚು ಕತೆಗಳನ್ನು ಬರೆಯಲಿಲ್ಲ. ನನಗೇಕೋ ಉತ್ಸಾಹವೇ ಇಲ್ಲದಂತಾಗಿದೆ. ಬರಹಗಾರರಿಗೆ ಇದು ಒಳ್ಳೆಯ ವರುಷವಲ್ಲವೆಂದೆನಿಸುತ್ತದೆ. ಪುಸ್ತಕಗಳು ಮಾರಾಟವಾಗುತ್ತಿಲ್ಲ. ಏನು ಬರೆದರೂ ಜನರ ಮನಸ್ಸು ಆಕರ್ಷಿಸುವಂತಿಲ್ಲ.

ನನ್ನ ಪ್ರಕೃತಿ ಕೆಡುತ್ತಿದೆ. ಪತ್ರಿಕೆಗಳಿಗೆ ಬರೆಯುವುದು ಬೇಸರವಾಗಿದೆ. ವಾಚನಾಲಯದಲ್ಲಿ ಎಲ್ಲಿಯಾದರೂ ಒಂದು ಮೂಲೆಯಲ್ಲಿ ಓದುತ್ತ ಕುಳಿತು ಸುಮ್ಮನೇ ಸದ್ದಿಲ್ಲದೆ ಕಾಲಕಳೆಯಲೇ ಎಂದೆನಿಸುತ್ತದೆ. ನನ್ನಲ್ಲಿ ಈಬಗೆಯ ನಿರಾಶೆ ತಲೆದೋರಲು ಕಾರಣವನ್ನು ನಾನು ಅರಿಯುವಂತಿಲ್ಲ. ನನ್ನ ದೇಹ ಸ್ಥಿತಿಯೇ ಈ ಬಗೆಯ ನಿರುತ್ಸಾಹಕ್ಕೆ ಕಾರಣವಾಗಿರಬಹುದು.

ಈ ಹೊಸ ಕಾದಂಬರಿಯು ಉತ್ತಮ ಸಾಹಿತ್ಯ ಕೃತಿಯೆಂದು ನನ್ನ ನಂಬಿಕೆ. ಆದರೆ ಇದಕ್ಕೆ ಜನರಿಂದ ಹೆಚ್ಚು ಬೆಂಬಲ ದೊರೆತು ಹೆಚ್ಚು ಹಣ ದೊರೆಯುವದೆಂಬ ಆಶೆ ನನಗಿಲ್ಲ. ಈ ಪುಸ್ತಕವು ಸಾಹಿತ್ಯ ದೃಷ್ಟಿಯಿಂದ ಉತ್ತಮವಾಗಿರುವದರಿಂದ ಸಾಮಾನ್ಯ ಜನರು, ಶ್ರೀಮಂತರು ಇದನ್ನು ಹೆಚ್ಚಾಗಿ ಬೆಲೆ ಮಾಡುವರೆಂದು ನನಗೆನಿಸುವುದಿಲ್ಲ. ಆದ್ದರಿಂದ ನನ್ನ ವರಮಾನವನ್ನು ಹೆಚ್ಚಿಸಿಕೊಳ್ಳುವ ಮತ್ತೊಂದು ವಿಧಾನವನ್ನು ಹುಡುಕಬೇಕಾಗಿದೆ. ಪ್ರಕಟನೆಕಾರರನ್ನೇ ಕೇವಲ ನಂಬಿಕೊಂಡಿರುವುದು ಲಾಭದಾಯಕವಾಗಲಾರದು. ನಾಟಕ ಗೃಹಗಳಿಗೆ ರುಚಿಸುವ ನಾಟಕ ಸಾಹಿತ್ಯವನ್ನು ಬರೆಯುವುದು ಅನುಕೂಲವೆಂದು ತೋರುತ್ತದೆ. ಈ ನಾಟಕ ಸಾಹಿತ್ಯದಿಂದ ನನ್ನ ವರಮಾನ ಹೆಚ್ಚಿದರೆ ನಾನು ಧನ್ಯ. ನನ್ನ ಈ ಮಾನಸಿಕ ದುಃಖ ದುಗುಡುಗಳು ದೂರವಾಗಬಹುದು. ನಿನ್ನ ಅಭಿಪ್ರಾಯವೇನು? ಜನರ ಈಗಿನ ಒಲವುಗಳನ್ನನುಸರಿಸಿ ಕೃತಿಗಳನ್ನು ಬರೆಯಬೇಕೆಂಬುದು ಸಾಹಿತಿಯ ಉತ್ತಮ ಲಕ್ಷಣವಾಗಲಾರದೆಂಬ ಮಾತು ನನಗೆ ತಿಳಿದಿದೆ. ಆದರೆ ಸಾಹಿ

ತಿಯ ಮನಸ್ಸಿಗೆ ನೆಮ್ಮದಿಯನ್ನು ಯಾವುದು ತಂದೊದಗುವುದೋ ಆದೇ ಮಾರ್ಗವನ್ನು ಬರಹಗಾರನು ಕೆಲಸವು ಅವಲಂಬಿಸಬೇಕಾಗುತ್ತದೆ ಅಲ್ಲವೆ? ಇಂತಹ ಪರಿಸ್ಥಿತಿಗೆ ಸೋತು ನಾನು ಕುಳ್ಳಿರುವುದಿಲ್ಲ.

ಪತ್ರಿಕಾಕರ್ತರ ಗೋಳು ನನಗೆ ತಿಳಿದಿದೆ. ಅವರನ್ನು ಹೆಚ್ಚು ಕಾಡುವುದು ನನಗೆ ಬೇಡಾಗಿದೆ. ನಾಟಕಗಳು ರಂಗಭೂಮಿಯ ಮೇಲೆ ಬಂದು ಜನಪ್ರಿಯವಾದರೆ, ಅವುಗಳನ್ನು ಪ್ರಕಟನೆಕಾರರು ಹಣಕೊಟ್ಟು ಪ್ರಕಟಿಸುವರು. ಹಣಗಳಿಸಲು ನಾಟಕಗಳನ್ನು ಬರೆಯುವೆನು. ಇದೊಂದು ಸುಲಭ ಮಾರ್ಗವೆಂದು ನನ ಮನೋಗತ.

ನನ್ನ ದೇಹಾರೋಗ್ಯ ಗುಣಮುಖ ಹೊಂದುವವರೆಗೆ ಸ್ವಲ್ಪ ಸಮಯ ನಾಟಕಗಳ ಕಡೆಗೆ ಮನಸ್ಸಿಡುವೆನು. ನಿನ್ನ ಆಶೀರ್ವಾದವಿರಲಿ, ತಾಯೆ.

ನಿನ್ನ ಮಗ— **ಗಾಯ್**

# ಗಾಯ್‌ದ-ಮೋಪಾಸಾ, ತನ್ನ ತಮ್ಮ ಹಾರ್ವೇನ "ಹುಚ್ಚು ಪ್ರಕರಣ"ದ ಒಲೆಗಳು



– ೩೬ –

[ ಮೋಪಾಸಾನು ಬಂಧುಮಿತ್ರ ವರ್ಗಗಳಲ್ಲಿ ಹೆಚ್ಚಿನ ಪ್ರೀತಿಯನ್ನು ಗಳಿಸಿಕೊಂಡಿದ್ದನು. ಅವನ ಸ್ನೇಹ ಬಹು ಆತ್ಮೀಯವಾದುದು. ಎಲ್ಲ ವಿಷಯಗಳನ್ನು ಗುರುವಿಗೆ ತಿಳುಹಿ, ಆತನ ಸಲಹೆ, ಸೂಚನೆಗಳನ್ನು ಪಡೆದು ಮುಂದುವರಿಯುತ್ತಲಿದ್ದನೆಂಬುದು ಈ ಪತ್ರದಿಂದ ತಿಳಿದುಬರುತ್ತದೆ.]

**ಪ್ರಿಯ ಗುರುವೇ,**

ಇಂದು ಮಡಾಂ ಕಾಮನ್‌ವಿಲ್ಲೀ ಇವರನ್ನು ಕಾಣಲು ಹೋಗಿದ್ದೆ. ಅವರಿಗೆ ಪ್ರಸ್ಪಷ್ಟವಿರಲಿಲ್ಲ. ನಾನು ಈ ಮೊದಲೇ ಅಲ್ಲಿಗೆ ಹೋಗಬೇಕಿತ್ತು. ಆದರೆ ಅದು ಸಾಧ್ಯವಾಗಲಿಲ್ಲ. ದಿನವೂ ಕಚೇರಿಯಿಂದ ಬರಬೇಕಾದರೆ

ಸಂಜೆ ಆರು ಹೊಡೆಯುತ್ತದೆ. ಮೈ ಕೈ ದಣಿಯುವಂತೆ ದುಡಿದ ನಂತರ ಮನಸ್ಸಿಗೆ ಶಾಂತಿಯೇ ಇರುವುದಿಲ್ಲ. ಸಂಜೆ ಕೆಲಸದ ನಂತರ ಮಿತ್ರರನ್ನು ಕಾಣಲು ಹೊರಡುವುದೆಂದರೆ ನನಗೆ ಒಲು ಬೇಸರ. ನಾನು ತಮ್ಮನ್ನು ಕಾಣುತ್ತಿಲ್ಲವೆಂದು ಮಿತ್ರರು ನನ್ನ ಮೇಲೆ ಕೋಪಗೊಂಡಿರುವರು. ನಾನೇನು ಮಾಡಲಿ? ಆಪ್ತರು ನನ್ನ ಮೇಲೆ ಮುನಿದಿರುವರು. ಆದರೆ ನನ್ನ ಕಚೇರಿಯ ಕೆಲಸದ ವಿವರ, ನನಗೆ ಅಲ್ಲಿ ಆಗುತ್ತಿರುವ ಮಾನಸಿಕ ಆಯಾಸ, ಮುಂತಾದ ವಿವರಗಳ ಅರಿವು ಅವರಿಗೆಂತು ಆಗಬೇಕು? ಮಧ್ಯಾಹ್ನದ ಬಿಡುವಿನಲ್ಲಿ ಹೋಗಬೇಕೆಂದರೆ ಜನರು ನಿದ್ರೆಯಲ್ಲಿರಬಹುದು ಇಲ್ಲವೇ ಕೆಲಸದ ಮೇಲೆ ಹೊರಗೆ ಹೋಗಲೂಬಹುದು. ಇದಲ್ಲದೆ ನನ್ನ ಕತೆಯೊಂದನ್ನು ಮತ್ತು ಕೆಲವು ಕವನಗಳನ್ನು ಮುಗಿಸಲೇಬೇಕಿತ್ತು. ಆದುದರಿಂದ ಬಿಡುವು ದೊರೆತಾಗಲೆಲ್ಲ ಆ ಕೆಲಸದಲ್ಲಿ ಮಗ್ನನಾಗುತ್ತಲಿದ್ದೆ. ಈ ಎಲ್ಲ ಕಾರಣಗಳನ್ನೂ ತಿಳಿದ ನನ್ನ ಆಪ್ತರು ನನ್ನನ್ನು ಬೇರೆ ಭಾವಿಸಬಾರದು. ನನ್ನ ಏಳಿಗೆಯ ದೃಷ್ಟಿಯಿಂದ ಅವರು ನನಗೆ ಸರ್ವವಿಧದಲ್ಲಿಯೂ ನೆರವಾಗುವುದು ಅವರ ಕರ್ತವ್ಯವಲ್ಲವೇ?

ನನ್ನ ಸ್ತ್ರೀ ಮಿತ್ರರಿಗೆ ಬೇಗೆ ಸಮಾಧಾನ ಹೊಂದುವ ತಾಳ್ಮೆ ಅವರಿಗೇಕೆ ಬರುವುದಿಲ್ಲವೋ ನಾನರಿಯೆ? ಶ್ರೀಮತಿ ಬ್ರೇನರು ನನ್ನ ವರ್ತನೆಯನ್ನು ಅಪಾರ್ಥಮಾಡಿಕೊಂಡು, ಕಾರಣವಿಲ್ಲದ ಸಂಶಯಗಳನ್ನು ತಾಳಿರುವರು. ಅವರಲ್ಲಿ ದಿನವೂ ನಾನು ರಾತ್ರಿ ಊಟ ಮಾಡುವುದು ರೂಢಿ. ಅವರ ಕೋರಿಕೆಯಂತೆ ನಾನವರಲ್ಲಿಗೆ ದಿನವೂ ರಾತ್ರಿ ಊಟ ಮಾಡಿದಕೂಡಲೇ ಮನೆಗೆ ಬರುತ್ತಿದ್ದೆ. ಹರಟೆ ಕೊಚ್ಚುವುದು ನನಗೆ ಬೇಡಾಗಿತ್ತು. ಆದರೆ ಇದು ಅವರಿಗೆ ಸರಿಕಾಣಿಸಲಿಲ್ಲವೆಂದೆನಿಸುತ್ತದೆ. ಕಳೆದ ಅಕ್ಟೋಬರದಿಂದ ನಾನು ಮನೆಯವರನ್ನು ಸಹ ಒಂದು ಸಲವಾದರೂ ಕಂಡಿಲ್ಲ. ಪತ್ರಗಳನ್ನು ಬರೆಯಲು ಬಿಡುವು ದೊರೆಯಲಿಲ್ಲ. ಮತ್ತೆ ಕೆಲವು ದಿನಗಳ ನಂತರ ಶ್ರೀಮತಿ ಕಾಮನವಿಲೇಯವರಲ್ಲಿಗೆ ಹೋಗುವೆನು. ಅವರ ಕೋಪ ಶಮನವಾಗುವಂತೆ ವರ್ತಿಸುವೆನು. ಸರಿ ತಾನೆ?

ನಿಮ್ಮ ಆಪ್ತ **—ಗಾಯ್**

– ೩೭ –

[ ಗಾಯ್‌ನಿಗೆ ತಮ್ಮನ ಮೇಲೆ ಅಮಿತ ಪ್ರೀತಿ, ಆದರೆ ಪ್ಯಾರಿಸದಲ್ಲಿ ವಿಲಾಸಮಯ ಜೀವನವನ್ನು ಸಾಗಿಸುವುದು ದುಸ್ತರವಾಗಲು ಅವನಿಗೆ ಅನೇಕ ರೀತಿಯ ಉದ್ಯೋಗದಲ್ಲಿ ಸಂಬಳದ ಮೇಲೆ ಇರಲು ಮೋಪಾಸಾ ನೆರವಾದ: ಆದರೆ ಅವನ ದುಷ್ಟಗಳ ಮೂಲಕ ಅದು ನೆರವೇರಲಿಲ್ಲ. ಬೇಸರವಾಯಿತು. "ಹೆಣ್ಣಿನ ಬಾಳು" ಎಂಬ ಕಾದಂಬರಿಯಲ್ಲಿ 'ಪಾಲ್' ಎಂಬ ವ್ಯಕ್ತಿಯನ್ನು ತಂದಿರುವನು. ಹಾರ್ವೇಯ ದುರಂತ ಜೀವನ ಚಿತ್ರವನ್ನು ಇಲ್ಲಿ ನಿರೂಪಿಸಿರುವನು. ಮದುವೆಯಾದರೆ ಅವನು ಹೊಂಕೊದಿಂದು ಇರಬಹುದೆಂದು ಯೋಚಿಸಿದ (೧ ವರ್ಷ) ಆದರೆ ಹಾರ್ವೇನ ವರ್ತನೆ ಏನೂ ಮಾಡಿದರೂ ಸುಖಮಯವಾಗಲಿಲ್ಲ. ಅದೇ ವರುಷ ಅವನಿಗೆ ನರ್ಸರೀ ಕೆಲಸದಲ್ಲಿ ಸ್ವತಂತ್ರವಾಗಿರಲು ಅನುವು ಮಾಡಿಕೊಟ್ಟ ೧ ವರ್ಷದ ಹೊತ್ತಿಗೆ ಈ ವ್ಯವಹಾರವೂ ಕುಸಿಯಿತು. ಆಗ ಬೇಸರದಿಂದ ಕೇನ್ಸದಿಂದ ಮಾದಾಂಸ್ಟ್ರಾಸ್‌ಳೆಂಬ ಮಿತ್ರಳಿಗೆ ಬರೆದ ಪತ್ರ ಇದು. ]

ಮಿತ್ರಳೇ,

ಮನಸ್ಸಿಗೆ ನೆಮ್ಮದಿ ಇಲ್ಲ. ನನ್ನ ತಮ್ಮನ ಜೀವನ ಸುಖವಾಗಲು ನಾನು ಮಾಡಿದ ಯತ್ನಗಳೆಲ್ಲವೂ ಕೈಮೀರಿ ಹೋಗುತ್ತಿವೆ. ಇವನ ಈ ಬಗೆಯ ಜೀವನ ನನ್ನ ತಾಯಿಗೆ ವರ್ಣಿಸಲಾಗದ ದುಃಖ ದುಗುಡುಗಳನ್ನು ತಂದೊಡ್ಡಿದೆ. ಅವನ ವ್ಯಾಪಾರವು ಕುಸಿಯುತ್ತಿರುವುದು ಅವಳಿಗೆ ನೋವನ್ನುಂಟುಮಾಡಿದೆ. ಮೇಲೆ ಅವನ ದೇಹಸ್ಥಿತಿಯೂ ಕೆಡುತ್ತಿದೆಯಂತೆ. ಅವನನ್ನು ಈ ಆರೋಗ್ಯಧಾಮಕ್ಕೆ ಕರೆದುಕೊಂಡು ಬರಬೇಕೆಂದೆನಿಸಿದೆ. ಡಾಕ್ಟರರು ಅನುಮತಿಯನ್ನಿತ್ತ ಕೂಡಲೇ ಅವನನ್ನು ನಾನೇ ಕರೆದುತರುವೆನು. ಅವನಿಗೆ ಹುಚ್ಚು ಹಿಡಿಯುವ ಲಕ್ಷಣವಿದೆಯಂತೆ, ಈ ಬಗೆಯ ವ್ಯಾಧಿ ಅವನಿಗೆಲ್ಲಿ ಅನುವಾಯಿತೋ ತಿಳಿಯೆ. ಇದ್ದಕ್ಕಿದ್ದಂತೆ ಹೆಂಡತಿಯ ಕುತ್ತಿಗೆಯನ್ನು ಹಿಚುಕಲು ಯತ್ನಿಸಿದನಂತೆ. ತಕ್ಷಣವೇ ಅವನನ್ನು ಪ್ಯಾರಿಸದಲ್ಲಿ ಬೇರೆ ಸ್ಥಳದಲ್ಲಿಡಲು ಸೂಚಿಸಿರುವೆನು. ಬೇಗ ಅಲ್ಲಿಗೆ ಹೋಗಿ ನೋಡಿಕೊಂಡು ಮುಂದೇನು ಮಾಡಬೇಕೆಂಬುದನ್ನು ಯೋಚಿಸುವೆನು. ತಾಯಿಯವರಿಗೆ ಇದು ಇನ್ನೂ ತಿಳಿಯದು. ಮತ್ತೆ ಬರೆಯುವೆ.

ನಿಮ್ಮ ಮಿತ್ರ —ಗಾಯ್

## – ೩೮ –

(ಮೋಪಾಸಾನ ತಮ್ಮನಾದ ಹಾರ್ವೇ ಬಲು ತುಂಟನು. ಇವನು ತನ್ನ ಜೀವನದಲ್ಲಿ ಯೋಚಿಸುತ್ತಿದ್ದುದು ಈ ಈರ್ವರ ಪ್ರಗತಿ. ಹಾರ್ವೇಯು ಅಭಿರುಚಿಗಳೇ ಬೇರೆ. ಗಾಯ್‌ನಂತೆ ದೃಢಕಾಯನು ಆದರೆ ಹುಂಬ. ಮಿಲಿಟರಿಯಲ್ಲಿ ಸೇರಿದ. ಬಂದ ಹಣವೆಲ್ಲವನ್ನೂ ವೆಚ್ಚಮಾಡಿ ಯಾವಾಗಲೂ ತನ್ನ ಅಣ್ಣ ಮತ್ತು ತಾಯಿ ಇವರಿಗೆ ತೊಂದರೆ ಕೊಡುತ್ತಿದ್ದ. ಇಂತಹ ಸನ್ನಿವೇಶದಲ್ಲಿ ೧೫೫೦ ರಲ್ಲಿ ಗಾಯ್‌ನು ಕಾರ್ಶಿಕಾದಲ್ಲಿರುವಾಗ ನಾದಿನಿ ಲೂಸೀ ಪ್ರೇಯುಟೋವಿನಳಿಗೆ ಬರೆದ ಪತ್ರ.)

**ಪ್ರಿಯ ನಾದಿನಿಯೆ,**

ಕಾರ್ಶಿಕಾ ೧೫೫೦

ಹಾರ್ವೇ ನನ್ನ ತಾಯಿಯನ್ನು ಬಹಳವಾಗಿ ಕಾಡುತ್ತಿರುವನಂತೆ. ಅವನೀಗ ಬೆಳೆದುನಿಂತ ಯುವಕ. ದೇವರೇಕೆ ಅವನಿಗೆ ವಿವೇಕವನ್ನು ದಯಪಾಲಿಸಲಿಲ್ಲವೋ ತಿಳಿಯೆ. ಮಿಲಿಟರಿ ಕೆಲಸ ಬಿಟ್ಟುಬಂದು ಪ್ಯಾರಿಸದಲ್ಲಿ ಕಂಡಕಂಡವರಿಂದ ಸಾಲಮಾಡಿ ನಿರ್ಲಕ್ಷ್ಯೆಯಿಂದ ಜೀವಿಸುತ್ತಿರುವನಂತೆ. ಇವನು ಸುಧಾರಿಸುವ ಬಗೆಯೆಂತೋ ನಾನರಿಯೆ. ಮೊನ್ನೆ ಅವನಿಗೆ ಅನೇಕ ವಿಧದಲ್ಲಿ ಪತ್ರ ಬರೆದೆ. ಮುನ್ನೂರು ಫ್ರಾಂಕುಗಳನ್ನು ಕಳುಹಿಸಿದೆ. ಅವುಗಳು ಮುಟ್ಟಿದ ಬಗ್ಗೆ ಆಗಲಿ, ತನ್ನ ನಡತೆ ಆಚಾರಗಳ ಬಗ್ಗೆಯಾಗಲೀ, ಒಂದು ಪತ್ರವು ಸಹ ಬರೆದಿಲ್ಲ. ಹಣ ಬೇಕಾದರೆ ನಿರ್ಲಕ್ಷ್ಯೆಯ ಮತ್ತು ಗಾಬರಿಯ ಪತ್ರವೊಂದು ಬರೆಯುವನು. ಕಂಡಕಂಡ ಜನರಿಂದ ಸಾಲ ಬೇಡುವದು ಅವನ ನಿತ್ಯ ಜೀವನದ ಕೆಲಸವಾಗಿದೆ. ಈ ಬಗೆಯ ವರ್ತನೆ ತಾಯಿಯವರಿಗೆ ಅತೀವ ವೇದನೆಯನ್ನುಂಟುಮಾಡುವದಲ್ಲದೆ ಆಗಲೇ ಹಣ್ಣಾಗಿರುವ ಅವರ ಪ್ರಕೃತಿಯು ಹೆಚ್ಚು ಕೆಡಬಹುದೆಂದು ನನ್ನ ಭಯ. ಈಗ ಎರಡು ವರ್ಷಗಳಿಂದ ಇವನು ನಡಿಸುತ್ತಿಸುವ ಈ ದುರ್ಮಾರ್ಗದ ಜೀವನ, ದುಂದುಗಾರಿಕೆ, ಆ ನನ್ನ ತಾಯಿಯನ್ನು ಹೆಚ್ಚಾಗಿ ನೋಯಿಸಿದೆ. ಜೀವನವೇ ದುರ್ಭರವಾಗಿದೆ. ಪರಿಸ್ಥಿತಿಯನ್ನು ನಿಮಗೆ ತಿಳಿಸಿರುವೆನು. ನೀವಾದರೂ ಪತ್ರ ಬರೆಯಿರಿ.

ನಿಮ್ಮ ಬಂಧು **—ಗಾಯ್.**

— ೩೯ —

(ಪೀರೇಜೀನ್ ಎಂಬ ಕಾದಂಬರಿ ಪ್ರಕಟವಾದರಂತರ ಅದು ಜನರ ಮೆಚ್ಚುಗೆಯನ್ನು ಪಡೆಯಿತು. ಹೊರ ಪ್ರಾಂತದ ಸಾಹಿತಿ 'ಹೆನ್ರಿ ಜೇಮ್ಸ' ನುಂತಾದವರು ಇವನ್ನು ಹೊಗಳಿದರು. ಇವನ ಖ್ಯಾತಿ ಪರರಾಷ್ಟ್ರಗಳಿಗೂ ಹರಡಿದ್ದುದರಿಂದ ಅವನ ಪುಸ್ತಕಗಳು ಆ ದೇಶದಲ್ಲಿ ಹೆಚ್ಚು ಮಾರಾಟವಾಗತೊಡಗಿದವು. ಇದರಿಂದ ಮೋಪಾಸಾನ ಆರ್ಥಿಕ ಸ್ಥಿತಿ ಸುಧಾರಿಸಿದರೂ ಬಂದದ್ದೆಲ್ಲವೂ ವೆಚ್ಚವಾಗುತ್ತಿತ್ತು. ಈ ಪುಸ್ತಕಕ್ಕೆ ಅವನು ಬರೆದ ಮುನ್ನುಡಿಯಲ್ಲಿ ಕಾದಂಬರಿ ಸಾಹಿತ್ಯದ ಬಗ್ಗೆ ತನ್ನ ಬಿಚ್ಚುಮಾತಿನಲ್ಲಿ ಬಲು ವಿಚಾರ ಪರಿಪ್ಲುತವಾಗಿ ಬರೆದಿದ್ದನು. ಇದರಿಂದ ಇವನಖ್ಯಾತಿ ಹೆಚ್ಚಿತು. ಮುಂದೆ ಅವನು ದಿನಪತ್ರಿಕೆಗಳಿಗೆ ಲೇಖನಗಳನ್ನು ಬರೆಯುವದಕ್ಕಿಂತ ನಾಟಕ, ಕಾದಂಬರಿಗಳನ್ನು ಬರೆಯುವುದೇ ಲಾಭದಾಯಕವೆಂದು ಬಗೆದು 'ಪೀರೇಜೀನ್' ದಂತಹ ಮತ್ತೊಂದು ಕಾದಂಬರಿಯನ್ನು ಬರೆಯಲು ನಿಶ್ಚಯಿಸಿದನು. ಆ ಸಮಯದಲ್ಲಿ ಬರೆದ ಪತ್ರವಿದು.)

ಪ್ಯಾರಿಸ್
ಮೇ ೧೮೮೮.

**ಪ್ರಿಯ ತಾಯೆ,**

ಮತ್ತೊಂದು ಹೊಸ ಕಾದಂಬರಿಯನ್ನು ಬರೆಯುತ್ತಲಿದ್ದೇನೆ. ಇದರಲ್ಲಿ ಹೊಸತನವನ್ನು ಕಾಣಿಸಬೇಕೆಂದು ಪ್ರಯತ್ನಿಸುತ್ತಲಿದ್ದೇನೆ. ಹೊಸ ವ್ಯಕ್ತಿಗಳನ್ನು ಜನರೆದುರು ತಂದು ನಿಲ್ಲಿಸಬೇಕೆಂದು ನನ್ನ ಯತ್ನವಿದೆ. ಹೆಚ್ಚು ಕರುಣಾಜನಕ, ದುರಂತ ಚಿತ್ರಗಳನ್ನು ನಿರೂಪಿಸಬೇಕೆಂದೆನಿಸಿದೆ.

ನಿಮ್ಮಿಂದ ಪತ್ರಗಳೇ ಇಲ್ಲ. ಹೀಗೇಕೆ ಮೌನವನ್ನು ತಾಳಿರುವಿರಿ ? ಪತ್ರಗಳನ್ನು ನೀವು ಬರೆಯುತ್ತಿದ್ದರೆ ನನಗೆ ಸಮಾಧಾನವೆನಿಸುತ್ತದೆ. ನಿಮಗೆ ಪುಸ್ತಕಗಳು ಬೇಕಾದರೆ ನನಗೆ ತಿಳಿಸಿ, ಸಾಮಾನ್ಯ ಜೀವನದ, ಹಗುರವಾದ ಸನ್ನಿವೇಶಗಳನ್ನೊಳಗೊಂಡ ಪುಸ್ತಕಗಳನ್ನು ಕಳಿಸುವೆನು. ನಿಮ್ಮ ಈಗಿನ ವಯಸ್ಸಿಗೆ, ಪ್ರಕೃತಿಗೆ ಹೊಂದಿಕೊಳ್ಳುವಂಥ ಪುಸ್ತಕಗಳನ್ನೇ ಕಳಿಸುವೆನು. ನನಗೆ ಬರೆಯಲು ಸಂಕೋಚವೇಕೆ, ತಾಯೆ? ಓದಲು ಬೇಸರವೆ ? ಆದರೂ ಮನಸ್ಸಿಗೆ ನೆಮ್ಮದಿಯುಂಟು ಮಾಡಲು ಲಲಿತ, ಸರಳ, ಸನ್ನಿವೇಶಗಳು ನಿಮಗೆ ಬೇಸರವನ್ನುಂಟು ಮಾಡಲಾರವು. ನಿಮ್ಮ ಏಕಾಂತವೇ ದುಃಖವನ್ನು ತಂದೊಡ್ಡುತ್ತಿದೆ. ನಿಮಗೆ ಈ ಏಕಾಂತ ದೂರವಾಗಲಾರದೆಂಬುದು

ನನಗೆ ತಿಳಿದಿವೆ. ಆದರೆ ನಾನೇನುಮಾಡಲಿ? ನಿಮ್ಮ ದೇಹ ಅಸ್ವಸ್ಥತೆಗೆ ಇವೇ ಮೂಲ ಕಾರಣವೆಂಬುದನ್ನೂ ಅರಿತಿರುವೆನು. ನನ್ನ ಈ ಪತ್ರಗಳು, ನನ್ನ ಪುಸ್ತಕಗಳು, ಮತ್ತು ನಾನು ಕಳಿಸುವ ಇತರ ಪುಸ್ತಕಗಳೂ ರುಚಿಸುವವೆಂದು, ಕೆಲವನ್ನು ಇಂದು ಕಳಿಸುತ್ತಿರುವೆನು. ಸ್ವೀಕರಿಸಿ ನನ್ನನ್ನು ಆಶೀರ್ವದಿಸಿರಿ.

ನಿಮ್ಮ ಮಗ —ಗಾಯ್.

— ೪೦ —

(ತಮ್ಮನಾದ ಹಾರ್ವೇಗೆ ಕೊನೆಗೆ ಹುಚ್ಚು ಹಿಡಿಯಿತು. ಆ ಸಮಯದಲ್ಲಿ ಗಾಯ್‌ನ ಇಚ್ಛೆ ಮೇರೆಗೆ ಅವನನ್ನು ಪ್ಯಾರಿಸದ ಆಸ್ಪತ್ರಿಯಲ್ಲಿಡಲಾಯಿತು. ಆನಂತರ ಬ್ರಾನ್‌ದ ಆಸ್ಪತ್ರಿಗೆ ಒಯ್ದರು. ತಮ್ಮನನ್ನು ಕಾಣಲು ಬಂದಾಗ ನಡೆದ ಚಿತ್ರವನ್ನು ತನ್ನ ಪರಮ ಮಿತ್ರನಾದ ಪೀಟೋಬ್ಲೂನಿಗೆ ಬರೆದ ಪತ್ರ ಇದು.)

ಮಿತ್ರನೇ,

ಹಾರ್ವೇಗೆ ಮೊದಲು ಜ್ವರ ಕಾಣಿಸಿಕೊಂಡಿತಂತೆ. ಜ್ವರದ ಆವೇಗ ಹೆಚ್ಚಿದಂತೆಲ್ಲ ಅವನ ಪೇಚಾಟ ಹೆಚ್ಚತೊಡಗಿತಂತೆ. ಬಂದ ಜ್ವರ ಕಡಿಮೆಯಾಗಲೇ ಇಲ್ಲ. ಆನಂತರ ಅವನು ಹುಚ್ಚನಂತೆ ಆರ್ಭಟಿಸತೊಡಗಿದನಂತೆ. ಮೆದುಳು ಕೆಟ್ಟು ಹೋಗಿದೆಯಂತೆ. ಕೆಲವು ದಿನಗಳ ನಂತರ ಜ್ವರ ಕಡಿಮೆಯಾದರೂ ಅವನ ಹುಚ್ಚು ಕಡಿಮೆಯಾಗಲೇ ಇಲ್ಲವಂತೆ. ಮತ್ತೊಂದು ಹೊಸ ವಿಪತ್ತು ನಮ್ಮನ್ನು ಎದುರಿಸುತ್ತದೆ. ಆಗಲೇ ನೊಂದು, ಬಳಲಿ, ಬೆಂಡಾದ ನನ್ನ ತಾಯಿಗೆ ಈ ವಿಷಯ ತಿಳಿದರೆ ಅವರೆಂತು ದುಃಖಿಸುವರೋ ನಾನು ತಿಳಿಯೆ. ಆಸ್ಪತ್ರೆಯಲ್ಲಿ ಅವನನ್ನು ನಾನು ಕಾಣಲು ಹೋದೆ. ನನ್ನ ಕಂಡಾಗ ಅವನ ಕೋಪ ಇಮ್ಮಡಿ ಆಯಿತು. "ನಮ್ಮ ಮನೆಯನ್ನು ಹಾಳು ಮಾಡಿದವನು ನೀನೆ. ನೀನೆ ನನ್ನನ್ನು ರೊಚ್ಚಿಗೆಬ್ಬಿಸಿದವನು. ನನ್ನ ಜೀವನವನ್ನು ಕೆಡಿಸಿದವನು, ತೊಲಗಾಚೆ. ನನ್ನೆದುರು ನಿಲ್ಲಬೇಡ. ಇನ್ನೊಂದು ನಿಮಿಷ ಇಲ್ಲಿರುವೆಯಾದರೆ ನಿನ್ನನ್ನು ಕೊಂದುಬಿಡುವೆ" ಎಂದು ಚೀರಿದ.

ಹುಚ್ಚರ ವರ್ತನೆ ನನಗೆ ಪರಿಚಯವಿತ್ತು. ಅಲ್ಲಿಂದ ನನ್ನ ಕೋಣೆಗೆ ಬಂದು ಸುಮ್ಮನೆ ಅತ್ತುಬಿಟ್ಟೆ. ನಿಜ ಸ್ಥಿತಿಯನ್ನು ನಿನಗೆ ತಿಳಿಸಿರುವೆನು.

ನಿನ್ನ ಗೆಳೆಯ—**ಗಾಯ್**

— ೪೧ —

[ತಮ್ಮನಿಗೆ ಹುಚ್ಚುಹಿಡಿದ ಸನ್ನಿವೇಶ ಗಾಯ್‌ನಿಗೆ ಹೆಚ್ಚು ಸಂಕಟವನ್ನುಂಟು ಮಾಡಿತು; ಆವನ ಮಾನಸಿಕ ತೊಂದರೆ ಹೆಚ್ಚಾಯಿತು. ದಿಕ್ಕುಗಾಣದೆ ಅವನು ಯೋಚಿಸತೊಡಗಿದ. ಒದಗಿದ ಈ ದುಃಖದ ಪ್ರಸಂಗದ ಕೊನೆ ಹೇಗಾಗುವುದೆಂಬ ವಿಷಯ ಅವನ ತಲೆಯನ್ನು ಕೆಡಿಸಿತು. ಇಂತಹ ಉದ್ವೇಗಗೊಂಡ ಗಾಯ್‌ನು ತನ್ನ ವಿಶ್ರಾಂತಿಯ ಸ್ಥಳವಾದ ಏತ್ರೇದಿಂದ ಮಿತ್ರಳಾದ ಮೆಡಾಂ ಸ್ಟ್ರಾಸ್‌ಳಿಗೆ ಬರೆದ ಪತ್ರವಿದು.]

ಏತ್ರೇ
ಸಪ್ಟಂಬರ, ೧೮೮೮

ಮಿತ್ರಳೇ,

ನನ್ನ ಹೊಸ ಕಾದಂಬರಿ ಮುಂದರಿದಿದೆ ಎಂದು ನೀವು ಊಹಿಸಿರ ಬಹುದು. ಅಲ್ಲಿ ದೂರ ಇರುವ ನಿಮಗೆಂತು ಇಲ್ಲಿಯ ನನ್ನ ಇಂದಿನ ಪರಿಸ್ಥಿತಿ ತಿಳಿಯಬೇಕು. ನನ್ನ ತಮ್ಮನಾದ ಹಾರ್ವೇಗೆ ಹುಚ್ಚು ಹಿಡಿದದೆ. ಈ ದುರಂತವು ನಮ್ಮೆಲ್ಲರನ್ನೂ ಹುಚ್ಚು ಹಿಡಿಸುವಷ್ಟು ಪರಿಸ್ಥಿತಿಗೆ ತಂದಿಳಿಸಿದೆ. ಈಗ ಅನೇಕ ದಿನಗಳಿಂದ, ಏಕೆ ತಿಂಗಳುಗಳಿಂದ, ನನಗೆ ಏನನ್ನೂ ಬರೆಯುವು ದಾಗಿಲ್ಲ. ನನಗೆ ಮಾನಸಿಕ ಸಮಾಧಾನವೇ ಇಲ್ಲ. ಮುಂದೇನು ಎಂಬ ಪ್ರಶ್ನೆ ನನ್ನನ್ನು ಹುಚ್ಚೆಬ್ಬಿಸುತ್ತಿದೆ. ರಾತ್ರಿ, ಹಗಲು ವಿಪರೀತ ತಲೆನೋವು; ನಿದ್ರೆಯಂತೂ ಇಲ್ಲವೇ ಇಲ್ಲ. ಒಂದು ಪತ್ರ ಬರೆಯಲು ಸಹಾ ನನಗೆ ನೆಮ್ಮದಿ ಇಲ್ಲ. ಪ್ಯಾರಿಸಿಗೆ ಬಂದರೆ ಅಲ್ಲಿ ತಮ್ಮನ ಹುಚ್ಚು ವರ್ತನೆಯನ್ನೆದು ರಿಸಬೇಕು. ಇಲ್ಲಿದ್ದರೆ ಈ ಮಾನಸಿಕ ವೇದನೆಯನ್ನು ಅನುಭವಿಸಬೇಕು, ಮಾಡಲೇನು ?

ಪ್ರಕಟನೆಕಾರನಾದ ಹಾವಾರ್ಡನಿಂದ ಈಗ ಹಣಪಡೆದಿರುವೆ. ಅವನಿಗೆ ನನ್ನ ನಿಜಸ್ಥಿತಿಯನ್ನು ಬರೆದು ತಿಳಿಸಿರುವೆನು. “ಏಕ್ಸೇ” (Aix) ಎಂಬ

ಆರೋಗ್ಯಧಾಮಕ್ಕೆ ಹೋಗಿ ಚಿಕಿತ್ಸೆಯನ್ನು ಪಡೆಯುವೆನು. ಕೂಡಲೇ ಗುಣವಾಗಬಹುದೆಂಬ ನಂಬಿಕೆ ನನಗಿದೆ, ಎಂದು ನಾಳೆ ಅವರಿಗೆ ಪತ್ರಬರೆಯುವೆನು. ಈ ಸಣ್ಣ ಪತ್ರವನ್ನು ನಿಮಗೆ ಪ್ರಯಾಸದಿಂದ ಬರೆದಿರುವೆನು. ಏಕ್ಸೇದಿಂದ ಪತ್ರ ಬರೆಯುವೆನು.

ನಿಮ್ಮ ಮಿತ್ರ —ಗಾಯ್.

— ೪೨ —

[ ಗಾಯ್‌ನ ಜೀವನದಲ್ಲಿ ೧೮೮೮ ರ ವರುಷ ಬಹು ದುಸ್ತರವಾದುದೆಂದು ಹೇಳಬಹುದು. ಅವನಿಗೆ ಅನೇಕ ಸಂಕಟಗಳು ಬಂದೊದಗಿದವು. ಮೇಲೆ ಈ ಎಲ್ಲ ಮಾನಸಿಕ ತೊಂದರೆಗಳಿಂದ ಅವನ ಪ್ರಕೃತಿಯು ತೀರ ಕೆಡಹತ್ತಿತು. ತಮ್ಮನಿಗೆ ಹುಚ್ಚು ಹಿಡಿದ ಕೂಡಲೇ "ಎಲಾ-ಲಾ-ಬೇನ್" ಎಂಬ ಆರೋಗ್ಯಧಾಮಕ್ಕೆ ಹೋದ. ಅಲ್ಲಿ ಅವನ ತಾಯಿಯಾದ ಲಾರಾಳು ಬಂದಳು. ಅಲ್ಲಿ ಅವನಿಗೆ ಗುಣವೇನೂ ಆಗಲಿಲ್ಲ. ದಿನವೂ ಔಷಧ ಸೇವನೆಯೂ ತಪ್ಪಲಿಲ್ಲ. ಆಗ ಅವನು ಉದ್ವೇಗಗೊಂಡು ಮಾದಾಂ ಸ್ಟ್ರಾಸಳಿಗೆ ಬರೆದ ಪತ್ರ ಇದು. ]

ಎಲ್-ಲಾ-ಬೇನ್
ಸಪ್ಟಂಬರ್ ೧೮೮೮

ಮಿತ್ರಳೇ,

ಈ ವರುಷ ಬೇಸಿಗೆ ದಿನವೆಲ್ಲ ನಾನು ಬಲು ಕಷ್ಟದಲ್ಲಿ ಕಳೆದೆ. ನನ್ನ ದೇಹದ ಪರಿಸ್ಥಿತಿ ಕೆಡುತ್ತಲಿದೆ. ನನ್ನ ವೇದನೆಯ ಅಳವು ಹೇಳತೀರದು. ಯಾರ ಮುಂದೆ ತೋಡಿಕೊಳ್ಳಲಿ ನನ್ನ ದು:ಖವನ್ನು? ನನ್ನ ಇಂದಿನ ಈ ಅವಸ್ಥೆಯಲ್ಲಿ ನಾನು ಏನನ್ನೂ ಮಾಡಲಾರೆ. ಒಂದಕ್ಷರವನ್ನೂ ಬರೆಯಲಾರೆ. ಇಲ್ಲಿಯ ಸೀಸನ್ ಮುಗಿದ ಮೇಲೆ ಛಳಿಗಾಲ ಆರಂಭವಾದ ಕೂಡಲೇ ನಾನು ಆಫ್ರಿಕಾಕ್ಕೆ ಹೋಗಬೇಕೆಂದು ನಿಶ್ಚಯಿಸಿರುವೆನು. ಅಲ್ಲಿಯ ಬಿಸಿಲು ಹವೆ ಕೊಂಚ ಸಮವಾಗಿ ಕಾಣಬಹುದು. ಅನುಕೂಲವೆನಿಸಿದರೆ, ನನ್ನ ಪ್ರಕೃತಿಗೆ ಒಗ್ಗಿದರೆ ಅಲ್ಲಿಯೇ ಕೆಲವರುಷ ಇರಲು ನಿಶ್ಚಯಿಸಿದ್ದೇನೆ.

ಆದುದರಿಂದ ಮತ್ತೊಮ್ಮೆ ನಾನು ನಿಮ್ಮನ್ನು ಕಾಣುವುದೆಂದೋ ಎಂದೆನಿಸುತ್ತದೆ.

ಆದರೆ ಮುಂದಿನ ವಸಂತಕಾಲಕ್ಕೆ ಸ್ವಲ್ಪ ಸಮಯ ನಾನು ಪ್ಯಾರಿಸಕ್ಕೆ ಬರಬಹುದು. ಒಂದೆರಡು ತಿಂಗಳು ಇರಲೂಬಹುದು. ಪ್ಯಾರಿಸ ನಗರದ ಗಡಿಬಿಡಿಯ ಜೀವನಕ್ಕೆ ಹೊಂದಿಕೊಂಡು ಬಾಳಿದ ನನ್ನ ಜೀವನಕ್ಕೆ ಈ ಏಕಾಂತವಾಸ ಕಷ್ಟವೆನಿಸಬಹುದು. ಇದನ್ನು ಹೇಗೆ ಸಹಿಸುವಿರೆಂದು ನೀವು ಆಶ್ಚರ್ಯಪಡಬಹುದು. ಆದರೆ ಮಾಡುವುದೇನನ್ನು ? ದೇಹಾರೋಗ್ಯಕ್ಕೆ ಹೊಂದಿಕೊಂಡು ಹೋಗುವುದು ನನ್ನ ಕರ್ತವ್ಯವಲ್ಲವೆ?

ನಿರಾಶರಾಗಬೇಡಿ; ಮತ್ತೆ ಬರುವೆ. ಪ್ಯಾರಿಸದ ನಗರವು ನಾನಿಲ್ಲದಿದ್ದರೆ ಕಳಾವಿಹೀನವಾಗುವುದೆಂದು ನಿಮ್ಮ ಭಾವನೆಯಲ್ಲವೆ? ಮನಸ್ಸಿಲ್ಲದೆ ದೂರ ಇರಬೇಕಾಗಿದೆ, ಕ್ಷಮಿಸಿ.

ನಿಮ್ಮ ಮಿತ್ರ —**ಗಾಯ್**

— ೪೩ —

(ಗಾಯ್‌ನಿಗೆ ಏಕಾಂತವಾಸ ಒಗ್ಗದು. ಆಫ್ರಿಕಾಕ್ಕೆ ಹೋಗುವ ಮುನ್ನ ಹಾದಿಯಲ್ಲಿ ಅವನ ತಂದೆಯವರು "ಸೇಂಟ್ ಮಾಕ್ಸಿಮ"ದಲ್ಲಿ ಸುಂದರವಾದ ಮನೆಯಲ್ಲಿರುವುದನ್ನು ಕಂಡ. ಅವರೊಂದಿಗೆ, ಅಲ್ಲಿದ್ದ ತಾಯಿಯೊಂದಿಗೆ ಸ್ವಲ್ಪ ಸಮಯ ಕಳೆದ. ದಿನವೂ ಸಂಜೆ ಊಟ,ಪಾನೀಯಗಳಿಗೆಂದು ಸೇರುತ್ತಿದ್ದ ಸುಂದರಿಯರ ವೃಂದಗಳನ್ನು ಕಂಡು ಅವನು ನಿರುತ್ಸಾಹದಿಂದ ತನ್ನ ಮಿತ್ರನಾದ ಹೊಜಸ್-ಲಾ-ರೋ ಇವರಿಗೆ ಬರೆದ ಪತ್ರ.)

ಸೇಂಟ್ ಮಾಕ್ಸಿಮ
೧೮೮೮

ಮಿತ್ರರೇ,

ಇಲ್ಲಿ ನದಿಯ ದಂಡೆಯಲ್ಲಿ ವಾಸಮಾಡುವುದೆಂದರೆ ನನಗೆ ಬಲು ಹಿಗ್ಗು ಚಿಕ್ಕಂದಿನಿಂದ ಒಗ್ಗಿಬಂದ ನನ್ನ ಈ ನಿಸರ್ಗವಾತಾವರಣದ ಪ್ರೇಮವೇ ಇದಕ್ಕೆ ಕಾರಣ. ಹಳ್ಳಿಯ ಮುಗ್ಧೆಯರ ಸರಸವಾದ ಮಾತುಗಳು; ತಿಳಿನೀರಿನ ಕಾಲುವೆಗಳು; ಸುಂದರ ವನಾಂತರಗಳಿಂದ ತುಂಬಿದ ಪ್ರಕೃತಿ ದೇವಿಯ ಹಸಿರು ಗಿಡ-ಮರ ಬಳ್ಳಿಗಳು; ನನ್ನ ದೋಣಿಯಲ್ಲಿ ಕುಳಿತು ಮೆಲ್ಲನೆ ಸಾಗುವುದು ಇಲ್ಲವೆ ಗಿಡಗಳನೆರಳಿನಲ್ಲಿ ಕಾಲ್ನಡಿಗೆಯಲ್ಲಿ ನಡೆಯುವುದು ಮುಂತಾದ

ಹಳ್ಳೀ ಜೀವನ ನನಗೆಷ್ಟು ರುಚಿಸುತ್ತದೆ! ಈ ಪ್ರಕೃತಿಮಾತೆಯ ನಡುವೆ ನಾನಿರುವಾಗ ನಿಸರ್ಗದೇವತೆ ನನ್ನನ್ನು ಸುಖನಿದ್ರೆಯಲ್ಲಿರಿಸುವಳು. ನನ್ನನ್ನು ಸಹಿಸಿ ನಲಿಸುವಳು. ನನಗೆ ಬಲು ಆನಂದವೆನಿಸುತ್ತದೆ. ನನ್ನ ಈ ಹುಚ್ಚು ಹರಟೆಗೆ ನಗಬೇಡಿ. ಜಗತ್ತಿನಲ್ಲಿ ನಾವೆಲ್ಲರೂ ಹುಚ್ಚರಲ್ಲವೆ ?

ನಿಮ್ಮ ಮಿತ್ರ —ಗಾಯ್

– ೪೪ –

[ ಇಟಲೀಗೆ ಹೋಗುವಾಗ ಲಿಯಾನ್ಸದ ಹತ್ತಿರದಲ್ಲಿಯ ಆಸ್ಪತ್ರೆಯಲ್ಲಿದ್ದ ತಮ್ಮನಾದ ಹಾರ್ವೇನನ್ನು ಕಾಣಬೇಕಾಯಿತು. ಅವನು ಬಲು ನೊಂದುಕೊಂಡ. ಗಾಯ್‌ನು ಕಾಂಟೆಸ್ ಪೋಟೋಕೋಳಿಗೆ ಬರೆದ ಮತ್ತೊಂದು ಪತ್ರ. ಇದರಲ್ಲಿ ಮುಂದೆ ಬರಲಿರುವ ಸಂಕಟದ ದಿನಗಳನ್ನು ಊಹಿಸಿರುವನು. ಹುಚ್ಚನಾದ ತಮ್ಮನ ಸ್ಥಿತಿಯನ್ನು ವರ್ಣಿಸಿರುವನು. ]

ಲಿಯಾನ್ಸ
೧೮೮೯

ಮಿತ್ರರೇ,

ಇಂದು ನನ್ನ ತಮ್ಮನನ್ನು ಕಂಡೆ; ಅವನ ಭೀಕರಾಕೃತಿ ನನ್ನನ್ನು ಭಯಗೊಳಿಸಿದೆ. ಅವನ ವರ್ತನೆ ನನ್ನನ್ನು ಚಕಿತಗೊಳಿಸಿತು. ಅವನ ಚೀರುವಿಕೆ, ಆರ್ಭಟ, ಮಾತಿನಲ್ಲಿಯ ಕ್ರೋಧ, ಮುಂತಾದವುಗಳನ್ನು ಕಂಡು ನಾನು ಬೆದರಿದೆ. ನಾನು ರೈಲ್ವೇ ನಿಲ್ದಾಣಕ್ಕೆ ಹಿಂತಿರುಗುವಾಗ ಹುಚ್ಚರ ಆಸ್ಪತ್ರೆಯಲ್ಲಿದ್ದ ಅವನು ನನ್ನೊಂದಿಗೆ ಬರಬೇಕೆಂದು ಇಚ್ಛಿಸಿದ. ಆ ಆಶೆ ಅವನಲ್ಲಿ ತಲೆದೋರಿದಾಗ ಮೊದಲಿಗೆ ಕಂಡು ಬಂದ ಹುಚ್ಚನ ಲಕ್ಷಣಗಳೆಲ್ಲವೂ ಮಾಯವಾಗಿದ್ದವು. ಅವನು ಒಮ್ಮೆ ಮುಗ್ಧ ಬಾಲಕನಂತೆ ರೋದಿಸತೊಡಗಿದ. ನಾನು ತುಂಬಾ ಭಾರವಾದ ಹೃದಯದಿಂದ ನಿಲ್ದಾಣವನ್ನು ಸೇರಿದೆ. ನನ್ನ ಕಣ್ಣಲ್ಲಿ ನೀರೂರಿದವು. ವಿಧಿ ಇವನನ್ನು ಬಿಡುಗಡೆ ಕಾಣದಂತಹ ಬಂಧನದಲ್ಲಿರಿಸಿದೆ. ಇವನು ಮತ್ತೆಂದು ತನ್ನ ಮಡದಿಮಕ್ಕಳನ್ನು, ಹೆತ್ತ ತಾಯಿಯನ್ನು ಕಾಣುವನೋ ನಾನರಿಯೆ. ವಿಧಿಯು ಇವನನ್ನು ಆಪ್ತರಿಂದ ದೂರಿರಿಸಿದೆ. ಜನರು ಇವನನ್ನು ಜರಿಯುವರು. ಯಾರಿಗೂ ಇವನು

ಬೇಡುವವನಾಗಿರುವನು. ಗುಣವಾಗದ, ವಿವೇಚನೆ ಇಲ್ಲದ, ಅಮಾನುಷವಾದ ಬೇನೆಯೊಂದು ತನ್ನನ್ನು ಆವರಿಸಿದೆಯೆಂದು ಇವನು ಒಳಗೊಳಗೇ ಕೊರಗುತ್ತಿರುವನು. ಮನಸ್ಸಿನಲ್ಲಾಗುವ ವೇದನೆಯನ್ನು ಇವನಾರಿಗೆ ತಿಳಿಸಬೇಕು? ಹುಚ್ಚನಮಾತಿಗೆ ಯಾರು ಲಕ್ಷ್ಯ ಕೊಡುವರು? ನಕ್ಕರೂ, ಅತ್ತರೂ ಅರ್ಥಪೂರ್ಣವಾದ ಮಾತುಗಳನ್ನಾಡಿದರೂ, ಆಡದಿದ್ದರೂ ಇವನನ್ನು ಮೂರ್ಖನೆಂದು ತಿಳಿದು ಎಲ್ಲರೂ ಇವನ ವಾಕ್ಯಗಳನ್ನು ಕಡೆಗಣಿಸುವವರೇ.

ಆವನು ಬಳಲಿ ಬಡಕಲಾಗಿರುವನು. ಒಣಗಿ ಹೋಗಿರುವನು. ಇಂತಹ ಬೇನೆಯನ್ನು ವಿಧಿಯೇಕೆ ನಿರ್ಮಿಸಿರುವನೋ ನಾನು ತಿಳಿಯೆ. ಇದಕ್ಕೆ ಹೊಣೆಯಾರು? ದೇವರೆ? ಸಮಾಜವೆ? ಇಲ್ಲವೆ ಅವನೆ?

ಆಯ್ಯೋ! ಆ ನನ್ನ ತಮ್ಮ ಬಹಳ ದಿನಗಳು ಇನ್ನು ಜೀವಂತ ಉಳಿಯಲಾರ. ಇವನ ಸಾವಿನ ಸಂಕಟವನ್ನು ವಯಸ್ಸಾದ ನನ್ನ ತಾಯಿ ಹೇಗೆ ಭರಿಸಬಲ್ಲಳು? ಅವಳ ಸಂಕಟವ ಅರಿವುಳ್ಳ ನಾನು ಆ ನನ್ನ ತಾಯಿಯ ದುಃಖವನ್ನು ನೋಡಲಾರೆ. ಇದೆಲ್ಲವನ್ನು ಕಂಡ ನನಗೂ ಹುಚ್ಚು ಹಿಡಿದರೂ ಹಿಡಿಯಬಹುದು. ಆ ತಾಯಿ ಇನ್ನೆಷ್ಟು ಕಷ್ಟವನ್ನು ಅನುಭವಿಸಬೇಕು? ಈ ಜೀವನದಲ್ಲಿ ಇಲ್ಲಿಯ ವರೆಗೆ ಅನುಭವಿಸಿದ ಯಾತನೆ ಸಾಲದೆ? ಮಿತ್ರರೇ, ಮುಂದೆ ಬರೆಯಲಾರೆ. ದುಃಖದಿಂದ ತಪ್ತನಾಗಿರುವೆ. ಮತ್ತೆ ಬರೆಯುವೆನು.

ನಿಮ್ಮ ಮಿತ್ರ **—ಗಾಯ್**

— ೪೫ —

(ತಮ್ಮನ ಹುಚ್ಚು ಹೆಚ್ಚಿ ಜೀವಕ್ಕೆ ಅಪಾಯವಿದೆಯೆಂದು ತಿಳಿದು ಲಿಯಾನ್ಸ ಹತ್ತಿರವೇ ಇದ್ದ ಬ್ರಾನ್‌ನಗರದ ಹುಚ್ಚರ ಆಸ್ಪತ್ರೆಯಲ್ಲಿ ಕಂಡು ತನ್ನ ನಾದಿನಿಯಾದ ಲೂಯೀ ಪೋಯಿಟೋವಿನ್ನಳಿಗೆ ಬರೆದ ಪತ್ರ.)

**ಪ್ರಿಯ ನಾದಿನಿಯವರೇ,**

ಸಾಂಟಾ ಮಾರ್ಗರೀಟಾ
೧೮೯೦

ಪ್ರಿಯ ಹಾರ್ವೇನ ಪರಿಸ್ಥಿತಿ ತೀರ ಚಿಂತಾಜನಕವಾಗಿದೆ. ಆವನ ಈ ಹುಚ್ಚು ಗುಣಹೊಂದುವುದು ಅಶಕ್ಯವೆಂದೇ ನನ್ನ ನಂಬಿಕೆ. ಡಾಕ್ಟರ

ರದೂ ಇದೇ ಅಭಿಪ್ರಾಯ. ಇದು ತಾಯಿಯವರಿಗೆ ಇನ್ನೂ ತಿಳಿಯದು. ಮೊನ್ನೆ ಅವನೊಂದಿಗೆ ಕಳೆದ ಎರಡು ಗಂಟೆಗಳ ಸಮಯ ಅತಿ ಭಯಾನಕವಾಗಿದ್ದವು. ನಾನವನನ್ನು ಕಂಡಾಗ ಮಾತ್ರ ಚನ್ನಾಗಿ ಮಾತನಾಡಿದ. ಹುಡುಗನಂತೆ ರೋದಿಸಿದ. ಕೆಲಸಮಯ ಪೂರ್ಣ ಅರಿವಿನಿಂದ ಮಾತನಾಡಿದ. ಆದರೆ ಅದು ತಾತ್ಕಾಲಿಕ. ಸ್ವಲ್ಪಸಮಯದನಂತರ ಅರ್ಥವಿಲ್ಲದ ಮಾತು. ಈ ಬಗೆಯ ಹುಚ್ಚುಹಿಡಿಯಲು ಕಾರಣವೇನೋ ನನಗಂತೂ ತಿಳಿಯದಾಗಿದೆ.

ತಾಯಿಯನ್ನು ಕರೆತರುವುದೆಂದರೆ ಅವರೂ ಹಾಸಿಗೆಹಿಡಿದು ಮಲಗಿರುವರು; ಅರೆ ಎಚ್ಚರವಂತೆ. ಯಾರೊಂದಿಗೂ ಮಾತನಾಡುವುದಿಲ್ಲವಂತೆ. ಮಾತೆಂದರೆ ಅವಳಿಗೆ ಬೇಸರವಂತೆ. ನಡೆಯಲು ಶಕ್ತಿಯೇ ಇಲ್ಲ. ಅಲ್ಲಿ ಅವರ ಅವಸ್ಥೆ ಹಾಗೆ; ಇಲ್ಲಿ ತಮ್ಮನ ಸ್ಥಿತಿ ಇಂತು; ಮೇಲೆ ನನ್ನ ಪ್ರಕೃತಿ ಪೂರಾ ಕೆಟ್ಟುಹೋಗಿದೆ. ಎಲ್ಲವೂ ಗೊಂದಲ. ನನಗೇನೂ ತೋಚದಂತಿದೆ ಒಮ್ಮೆ ಇಟಲೀಗೆ ಹೋಗಿ ನನ್ನ ದೇಹಾಲಸ್ಯವು ಕೊಂಚ ಸರಿಯಾಗಲು ಯತ್ನಿಸುವೆನು. ; ಜಿನೇವಾದಿಂದ ಪತ್ರಬರೆಯುವೆನು. ನೀವು ಅಧೈರ್ಯರಾಗಬೇಡಿ.

ನಿಮ್ಮ ಬಂಧು —**ಗಾಯ್**

— ೪೩ —

(ಗಾಯ್‌ಸು ಮುಂದೆ ಜಿನೇವಾ, ಪೈಸಾ, ಫ್ಲೋರನ್ಸುಗಳನ್ನು ನೋಡಿಕೊಂಡು ನೇಪಲ್ಸಿಗೆ ಹೋಗಬೇಕೆಂದೆನಿಸಿದಾಗ ಅಜೀರ್ಣದ ಬೇನೆಯಿಂದ ಗಾಯ್‌ಸಿಗೆ ಜ್ವರಹೆಚ್ಚಲು ಮುಂದಿನ ಪ್ರವಾಸವನ್ನು ನಿಲ್ಲಿಸಿ ೧೮೮೯ ಅಕ್ಟೋಬರದ ಸುಮಾರಿಗೆ ಕೇನ್ಸಕ್ಕೆ ಬಂದು ಸೇರಿದ. ಅಲ್ಲಿ ತಾಯಿ ಮಕ್ಕಳ ಸಮ್ಮಿಲನವಾಯಿತು. ಲಾರಾ ತನ ಪ್ರೀತಿಯ ಗಾಯನನ್ನು ಕಂಡು ಹಿಗ್ಗಿದಳು. ಅವನ ದೇಹಸ್ಥಿತಿ ಕೊಂಚ ಪ್ರಗತಿ ಹೊಂದುವಂತೆ ಆರೈಕೆಮಾಡಿದುದಕ್ಕೆ ಗಾಯ್‌ನ ಆಪ್ತ ಸೆಕ್ರೆಟರಿಯಾದ ಫ್ರಾಂಕೋನಿಗೆ ತನ್ನ ಧನ್ಯವಾದಗಳನ್ನು ಅರ್ಪಿಸಿದಳು. ಆದರೆ ೧೮೮೯ರ ನವೆಂಬರ ೧೩ರಂದು ಹಾರ್ವೆ ಮರಣಹೊಂದಿದನೆಂಬ ವಾರ್ತೆ ಇವರಿಬ್ಬರನ್ನು ದುಃಖದಲ್ಲಿ ಕೆಡವಿತು. ಇಲ್ಲಿಗೆ ಗಾಯ್‌ನ ಸೋದರನಾದ ಹಾರ್ವೆನ ಇತಿಹಾಸ ಮುಗಿಯಿತು.

ಹಾರ್ವೇನ ಸಾವಿನ ದುರಂತ ಚಿತ್ರವನ್ನು ಗಾಯ್‌ನು ತನ್ನ ಆಪ್ತ ಸೆಕ್ರೆಟರಿಯಾದ ಫ್ರಾಂಕೊಗೆ ಬರೆದ ಪತ್ರದ ವಿವರ ಇದು.)

**ಪ್ರಿಯ ಫ್ರಾಂಕೋ,**

ತಮ್ಮನ ಅಂತ್ಯಗಳಿಗೆಯ ಸಮಯಕ್ಕೆ ನಾನು ಧಾವಿಸಿಬಂದುದು ನಿನಗೆ ತಿಳಿದವಿಷಯ. ಜೇನೆಯಿಂದ ನರಳುತ್ತಿದ್ದ ತಮ್ಮನನ್ನು ಮನೆಗೆ ಕರೆದುತರಲಾಗಲಿಲ್ಲ. ಡಾಕ್ಟರರ ಹೇಳಿಕೆಯಂತೆ ಹಾರ್ವೇನ ಸಾವು ಒಂದು ದಿನ ಮುಂಚಿತವಾಗಿಯೇ ಆಗಬೇಕಿತ್ತು; ಆದರೆ ನಾನು ಅವನನ್ನು ಜೀವಂತ ನೋಡುವ ಅದೃಷ್ಟವಿತ್ತು; ಆದುದರಿಂದಲೇ ಅವನು ನನ್ನ ಬರುವಿಕೆಗೆ ಕಾದಂತೆ ಕಂಡುಬಂತು. ಅವನ ಹಾಸಿಗೆಯನ್ನು ನಾನು ಸಮೀಪಿಸಿ ಮುದ್ದಿಸಿದೆ; ಮೆಲ್ಲನೆ ನನ್ನ ಕೊನೆಯ ಆಶೀರ್ವಾದಗಳನ್ನಿರಿಸಿದೆ. ಆದರೆ ನನ್ನ ಭ್ರಾತೃಪ್ರೇಮದ ನುಡಿಗಳು ಅವನನ್ನು ಎಚ್ಚರಿಸಿರಬೇಕು. ಕುಗ್ಗುತ್ತಿರುವ ಅವನ ನರಗಳಿಗೆ ಚೇತನ ಬಂದಿರಬೇಕು. ಬಂಧು ಪ್ರೇಮದ ಬಿಗುವು ಏನೆಂಬುದನ್ನು ನಾನಾಗ ಅರಿತೆ. ಅವನು ಮೆಲ್ಲಗೆ ಕಣ್ಣುತೆರೆದು, ಜಿಗಿದೆದ್ದು ಕುಳಿತು ನನ್ನನ್ನು ತಬ್ಬಿಕೊಂಡು ಉಕ್ಕಿಬರುವ ದು:ಖದ ಕಣ್ಣೀರಿನಿಂದ ಗಟ್ಟಿಯಾಗಿ "ಗಾಯ್, ಗಾಯ್" ಯೆಂದು ಚೀರಿದ. ಆ ಕೂಗು ನಮ್ಮಿರ್ವರ ಎಳೆತನದ ಆಟಪಾಟಗಳಲ್ಲಿಯ ಚೀರಾಟ ನೆನಪಿಗೆ ತಂದುಕೊಟ್ಟಿತು. ನನಗೆ ದು:ಖ ತಡೆಯಲಾಗಲಿಲ್ಲ. ಕರವಸ್ತ್ರದಿಂದ ಮುಖಮುಚ್ಚಿಕೊಂಡು ಕಣ್ಣೀರನ್ನು ಒರಸಿಕೊಂಡೆ. ಅವನ ಕಣ್ಣೀರನ್ನು ಒರಸುತ್ತ ಸಮಾಧಾನದ ನುಡಿಗಳನ್ನು ಹೇಳಿದೆ. ಅವನು ಕೈಸನ್ನೆಯಿಂದ ನನ್ನನ್ನು ಹತ್ತಿರ ಕರೆದ: ತುಟಿಗಳನ್ನು ಅಲುಗಾಡಿಸಿದ. ತನಗೆ ವಿಯೋಗದ ಮುತ್ತನ್ನಿಡಬೇಕೆಂದು ಅವನ ಬಯಕೆಯಾಗಿರಬೇಕು. ನನ್ನ ತುಟಿಗಳನ್ನು ಮುದ್ದಿಟ್ಟು, ನನ್ನ ಕೈಗಳನ್ನು ಮುದ್ದಿಸಿದ. ಅಲ್ಲಿಗೆ ಮುಗಿಯಿತು ಅವನ ಜೀವನದ ಕೊನೆಯ ಉಸಿರು. ಹಾಗೆಯೇ ನನ್ನ ಎದೆಯ ಮೇಲೆ ಒರಗಿ ಸಾವನ್ನಪ್ಪಿದ. ತರುಣ ವಯಸ್ಸಿನಲ್ಲಿಯೇ ನಮ್ಮಿಂದ ಅವನನ್ನು ವಿಧಿ ದೂರಾಗಿಸಿತು. ಅವನ ಅಂತಃಕರಣದ ಆಳವನ್ನು ಆಗ ನಾನು ಅರಿತುಕೊಂಡೆ. ಫ್ರಾಂಕೋ, ಇಲ್ಲಿಗೆ ಮುಗಿಸುವೆ ನನ್ನ ತಮ್ಮನ ಸಾವಿನ ಚಿತ್ರಣವನ್ನು. ವಿವರಗಳನ್ನು ಸಮಕ್ಷಮ ಹೇಳುವೆನು.

ನಿನ್ನವನೇ —ಗಾಯ್

# ತಮ್ಮನ ಸಾವಿನ ನಂತರ ಬರೆದ ಓಲೆಗಳು

– ೪೭ –

• (ತಮ್ಮನ ಸಾವು, ತಾಯಿಯ ಖಾಯಿಲೆ, ತನ್ನ ಸ್ವಂತದ ತಲೆನೋವು ಗಾಯ, ನನ್ನು ಬಲು ಹಣ್ಣಾಗಿಸಿದ್ದವು. ಆದರೂ ಬರೆಯುವುದು ಅವನ ಜೀವನದ ಕಸಬು ಆಗಿತ್ತು. ದಿನವೂ ಏನಾದರೂ ಹೊಸತನ್ನು ಬರೆಯದೇ ಇದ್ದರೆ ಹಣವು ಬರುವುದು ಕಷ್ಟ. ಇದರ ಮೇಲೆ ಪ್ರಕಾಶಕರು ಇವನನ್ನು ಬಲವಂತದಿಂದ ಬರೆಯಲು ಪ್ರೇರೇಪಿಸುತ್ತಿದ್ದರು. "ಸಾವಿನ ಕತೆ" ಎಂಬ ಕಾದಂಬರಿಯನ್ನು ಬರೆಯುತ್ತಿರುವಾಗಲೇ ಅವನು ತನ್ನ ಕೊನೆಯ ನಾಲ್ಕು ಕಥೆಗಳನ್ನು ಬರೆದ. ಪ್ರಕಟಿಸುವ ಆತುರತೆಯನ್ನು ವ್ಯಕ್ತಮಾಡಿದ ಪ್ರಕಾಶಕ ಹಾವಾರ್ಡನಿಗೆ ಬರೆದ ಪತ್ರವಿದು.)

**ಪ್ರಿಯ ಹಾವಾರ್ಡರೇ,**

ನನ್ನ ಈ ನಾಲ್ಕು ಕತೆಗಳು ತೀರ ಹೊಸರೀತಿಯವು. ಅವುಗಳನ್ನು ಬರೆದು ಮುಗಿಸಲು ನೀವೇ ಕಾರಣರು. ಇವುಗಳಲ್ಲಿ "ಹುರುಳಿಲ್ಲದ ಸೌಂದರ್ಯ" (Useless Beauty-ಯೂಸ್‌ಲೆಸ್ ಬ್ಯೂಟೀ) ಎಂಬ ಕತೆ ಬಲು ಸೊಗಸಾದುದು. ಹೊಸ ಕತೆಗಳನ್ನು ಬರೆಯಬೇಕೆಂದು ನೀವು ಕೇಳುತ್ತಿರುವಿರಿ. ನಾನು ಜೀವಿಸಲು ಬರೆಯಲೇಬೇಕು. ನನ್ನಬಗ್ಗೆ ನೀವು ತೋರುತ್ತಿರುವ ಹಿರಿಯಪ್ರೀತಿ, ವಿಶ್ವಾಸಗಳಿಗೆ ಚಿರಋಣಿ; ಅವಸರಪಡಬೇಡಿ. ಕೊಟ್ಟಮಾತಿಗೆ ತಪ್ಪಿ ನಡೆಯುವುದು ನನಗೆ ಸೇರದು. ನನ್ನನ್ನು ವಿಮರ್ಶಕರು ಬಲು ಕಟುವಾಗಿ ಟೀಕಿಸುತ್ತಿರುವರು. ಯಾವಾಗಲೂ ಕೀಳುದರ್ಜೆಯ ಕತೆಗಳನ್ನೇ ಬರೆಯುತ್ತಿರುವೆನೆಂದು ಅವರವಾದ. ಅಹುದು ನಾನು ಹುಟ್ಟು ಬಡವ; ಹಳ್ಳಿಗನು. ನನ್ನ ಸುತ್ತಮುತ್ತಲಿನ ವಾತಾವರಣವೂ ಅಂತಹದೇ. ಎಂದಮೇಲೆ ಸಾಹಿತ್ಯದಲ್ಲಿ ಸತ್ಯಪ್ರತಿಪಾದನೆಯೇ ಮುಖ್ಯವೆಂಬ ಗುರು ಫ್ಲಾಬೇರನ ಮತ್ತು ನನ್ನ ಸ್ವಂತ, ನಂಬಿಕೆಗಳಂತೆ ಇಲ್ಲಿಯವರೆಗೆ ಈ ಬಗೆಯ ಚಿತ್ರಗಳನ್ನೇ ನನ್ನ ಕತೆಗಳಿಗೆ ಉಪಯೋಗಿಸಿಕೊಂಡಿರುವೆನು.

ಆದರೆ ಈ ನಾಲ್ಕು ಕತೆಗಳಲ್ಲಿ ಇದೇ ಮುಖ್ಯವಾದ ಕತೆಯು ಶ್ರೀಮಂತರ ವರ್ತನೆಯ ಒಂದು ಚಿತ್ರ. ಶ್ರೀಮಂತರು ಎಷ್ಟು ಹುಂಬರು, ದುರಹಂಕಾರಿಗಳು, ಮತ್ತು ಸ್ವಪ್ರತಿಷ್ಠಿತರೂ ಎಂಬುದನ್ನು ಈ ಕತೆಯಲ್ಲಿ ನಿರೂಪಿಸಿರುವೆನು. ಇದರಿಂದ ನಿಮಗೂ ಹೆಚ್ಚು ಹಣ ದೊರೆಯಬಹುದು.

ಇದೊಂದೇ ನನ್ನ ಉತ್ತಮ ಕತೆ. ನನ್ನ ಹೆಸರು ಚಿರಂತನವಾಗಿಸುವ ಕತೆ ಇದುವೇ. ಇನ್ನೇನು? ನಿಮ್ಮಿಷ್ಟ ನೇರವೇರಿತೆ? ಇದೇ ಬಗೆಯ ಇನ್ನೆರಡು ಕಾದಂಬರಿಗಳ ರೂಪರೇಷೆಯನ್ನು ಸಿದ್ಧಗೊಳಿಸಿರುವೆನು. ಸಮಕ್ಷಮ ಕಂಡಾಗ ವಿವರಗಳನ್ನು ಹೇಳುವೆನು. ನಮಸ್ಕಾರ.

ನಿಮ್ಮ ವಿಶ್ವಾಸಿಗ —**ಗಾಯ್**

— ೪೮ —

[ "ಹೆಣ್ಣಿನ ಹೃದಯ'' (Notre-Coeur ನೋರ್ ಕೋರ್) ಎಂಬ ಕಾದಂಬರಿ ಫರ್ಡಿನೆಂಡ ಜ್ರೂನೇಟೀಯುವರ ಪತ್ರಿಕೆಗಳಲ್ಲಿ (೧೮೯೦ ರ ಮೇ ಮತ್ತು ಜೂನ್ ತಿಂಗಳುಗಳಲ್ಲಿ) ಪ್ರಕಟವಾಗಿ ಮುಂದೆ ೧೮೯೦ ರ ಜುಲೈ ತಿಂಗಳಲ್ಲಿ ಆತನಿಂದಲೇ ಪುಸ್ತಕ ರೂಪದಲ್ಲಿ ಪ್ರಕಟವಾಯಿತ.. ಇದನ್ನು ಹಾವಾರ್ಡನಿಗೇಕೆ ಕೊಡಲಿಲ್ಲವೆಂಬುದು ರಹಸ್ಯದ ವಿಷಯ. ಇದರ ಬಗ್ಗೆ (Paul Bourget) ಪಾಲ್ ಬೋರೋಗ್, ಅನಟೋಲ್ ಪ್ರಾನ್ಸ, ಮತ್ತು ಜೂಲ್ ಲಾಮೇಟ್ರೀ ಇವರುಗಳು ಒಳ್ಳೇ ಅಭಿಪ್ರಾಯಗಳನ್ನು ಸೂಚಿಸಿರುವರು. ಈ ಪುಸ್ತಕದ ಮಾರಾಟದ ಬಗ್ಗೆ ಗಾಯ್‌ನು ತಾಯಿಯಾದ ಲಾರಾಳಿಗೆ ಬರೆದ ಪತ್ರ. ]

**ಮಮತೆಯ ತಾಯೆ,**

ನಿನ್ನ ಹೃದಯ ಹಣ್ಣಾಗಿದೆ. ನಾನೂ ಬಹಳ ನೊಂದುಕೊಂಡಿರುವೆನು. ಆದರೆ ಜೀವಿಸುವವರೆಗೆ ನನಗೆ ದುಡಿತ ತಪ್ಪದು ಇದೇ ಜುಲೈ (೧೮೯೦) ''ಹೆಣ್ಣಿನ ಹೃದಯ"ವೆಂಬ ನನ್ನ ಹೊಸ ಕಾದಂಬರಿ ಪ್ರಕಟವಾಯಿತು. ಈ ಕಾದಂಬರಿ ಎರಡು ತಿಂಗಳ ಹಿಂದೆ ಮಿತ್ರ ಫರ್ಡಿನೆಂಡಿನ ಪತ್ರಿಕೆಯಲ್ಲಿ ಪ್ರಕಟವಾದುದನ್ನು ಅನೇಕರು ಓದಿ ಆನಂದಿಸಿರುವರು. ಇದರಿಂದ ನನಗೆ ಲಾಭವೇನೂ ಆಗಿಲ್ಲ. ಹೀಗಾದುದರಿಂದ ನನ್ನ ಈ ಪುಸ್ತಕವು ಹೆಚ್ಚು ಮಾರಾಟವಾಗದೇ ಪ್ರಕಾಶಕರಿಂದ ನನಗೆ ಸಾಕಷ್ಟು ಹಣ ದೊರೆಯದಿರಬಹುದು. ಶ್ರೀಮಂತರು, ಪ್ರಸಿದ್ಧ ವರ್ತಕರು, ವಕೀಲರು, ನ್ಯಾಯಾಧೀಶರೂ, ಹಣವುಳ್ಳವರೂ ಅದರ ಸವಿಯನ್ನಾಗಲೇ ಅನುಭವಿಸಿರಬಹುದು. ಅವನ ಪತ್ರಿಕೆ ಸುಮಾರು ೩೦,೦೦೦ ದಷ್ಟೇ ಮಾರಾಟವಾಗುವವಂತೆ. ಇರಲಿ ಆದರೂ ನೋಡಬೇಕು ನನ್ನ ಅದೃಷ್ಟ ಹೇಗಿದೆಯೋ?

ಈ ಪತ್ರವನ್ನು ಕಿರಿದಾಗಿಸುವೆನು. ಮತ್ತೊಂದು ವಿಷಯವನ್ನು ನಿನಗೆ ಬರೆದು ನಿನ್ನ ಮನಸ್ಸನ್ನು ನೋಯಿಸಬಾರದೆಂದು ನೆನೆದೆ. ಆದರೆ ಅದನ್ನು ನಿನಗೆ ತಿಳಿಸಲೇಬೇಕಾಗಿದೆ. ನನಗೆ ಕಣ್ಣುಬೇನೆ ಕಾಣಿಸಿಕೊಂಡಿದೆ; ಮತ್ತೆ, ಮತ್ತೆ, ಡಾಕ್ಟರುಗಳಿಂದ ಉಪಚಾರವನ್ನು ಪಡೆದು ನನಗೆ ಸಾಕಾಗಿಹೋಗಿದೆ ಡಾಕ್ಟರ್ ಭೂಛೇರವರ ಚಿಕಿತ್ಸೆ ಬಲು ನೋವನ್ನುಂಟುಮಾಡಿತು. ಆದ್ದರಿಂದ ಈಗ ಅವರ ಹತ್ತಿರ ಹೋಗುತ್ತಿಲ್ಲ. ಮತ್ತೋರ್ವ ಡಾಕ್ಟರ್ ಮಿತ್ರರು ಬಿಸಿಯಾದ ಹವೆ, ಪರ್ವತ ಶ್ರೇಣಿಗಳ ಗಾಳಿ ನನ್ನ ಬೇನೆಗೆ ಸರಿಯಾದ ಔಷಧವೆಂದು ಹೇಳಿರುವನು. ಆದುದರಿಂದ ನಾನು ಇನ್ನು ಕೆಲವು ದಿನಗಳಲ್ಲಿ ಪ್ಲಾಂಬೇರ್ ಪರ್ವತ ಶ್ರೇಣಿಗಳಿಗೆ ಹೋಗಬಹುದು.

ಈಗ ಮತ್ತೊಂದು ಚಿಕ್ಕ ಮನೆಗೆ ಬದಲಾಯಿಸಿರುವೆನು. ಚೊಕ್ಕವಾಗಿದೆ. ಆದರೆ ಇದರಲ್ಲಿ ಹೆಚ್ಚು ಕೋಣೆಗಳಿಲ್ಲ. ಫ್ರಾಂಕೋ ನನ್ನ ಹತ್ತಿರವೇ ರಾತ್ರಿಗಳಲ್ಲಿ ಕೂಡ ಇರಬೇಕಾಗುವುದು. ನನಗೆ ಕಾಲುನೋವು ಬೇರೆ ಆರಂಭವಾಗಿದೆ. ಮುಂದಾವ ಬೇನೆಗಳು ತಲೆದೋರುವವೋ ತಿಳಿಯದು? ನಿನಗೆ ಬೇಸರವಾಯಿತೇ? ಧೈರ್ಯವನ್ನು ತಾಳು ತಾಯಿ. ನಿನ್ನ ಆಶೀರ್ವಾದಗಳಿರಲಿ.

ನಿಮ್ಮ ಪ್ರೀತಿಯ ಮಗ —**ಗಾಯ್**

— ೪೯ —

[ ನವೆಂಬರ ೧೮೯೦ ರಲ್ಲಿ ಫ್ಲಾಬೇರನ ಸ್ಮಾರಕ ಸಮಾರಂಭಕ್ಕೆ ರೋವೆನ್ ನಗರಕ್ಕೆ ಹೋದಾಗ ಗಾಯ್‌ನ ದೇಹಸ್ಥಿತಿ ತೀರ ಕೆಟ್ಟುಹೋಗಿತ್ತು. ಪ್ರಕಾಶಕ ಎಡ್ಮಂಡ್ ಗಾನ್‌ಕೋರ್‌ನು ಆಶ್ಚರ್ಯಚಕಿತನಾದ. ಅವನಿಗೆ ನಿದ್ರೆ ಬರುತ್ತಿರಲಿಲ್ಲ. ಕಾರಣವಿಲ್ಲದೆ ಸಿಟ್ಟಿಗೇಳುತ್ತಿದ್ದ. ತನ್ನ ಚಿತ್ರವನ್ನು ಯಾರಾದರೂ ಪ್ರಕಟಿಸಿದರೆ ಬಹಳ ರೇಗುತ್ತಿದ್ದ. ಬೇಸಿಗೆಯಲ್ಲಿ ಪ್ರವಾಸವನ್ನು ಕೈಕೊಂಡರೆ ಒಳಿತೆಂದು ತಿಳಿದ. ಪ್ಲಾಂಬೇಯರ ಪ್ರಾಂತಗಳಿಗೆ ಹೋದ ಆನಂತರ ಲಾಗುವೇಯಲ್ಲಿದ್ದ ತನ್ನ ಸ್ವಂತ ಮನೆಗೆ ಹೋಗಿ ಕೆಲವು ದಿನಗಳಿದ್ದ. ನಡುವೆ ರಿವೇರಾದಲ್ಲಿದ್ದ ತನ್ನ ತಾಯಿ ತಂದೆಗಳನ್ನು ನೋಡಿಕೊಂಡು ಬಂದ. ಇದೆಲ್ಲ ಆದನಂತರ ನವೆಂಬರದಲ್ಲಿ ತನ್ನ ಗುರುವಿನ ಸ್ಮಾರಕ ಉತ್ಸವ ಸಮಯಕ್ಕೆ ಪ್ಯಾರಿಸಗೆ ಬಂದು ಸೇರಿದ. ಆನಂತರ ಅದೇ ವರುಷ

ಡಿಸೆಂಬರದಲ್ಲಿ ತನ್ನ ಅಜ್ಞಾತ ಸ್ತ್ರೀ ಪತ್ರವ್ಯವಹಾರಿಗೆ ಬರೆದ ಪತ್ರ. ಇವರಿಬ್ಬರಲ್ಲಿ ಬಹಳ ದಿನಗಳಿಂದಲೂ ಪತ್ರವ್ಯವಹಾರ ನಡೆದಿತ್ತು; ಆದರೆ ಪರಸ್ಪರ ಭೇಟಿಯಾಗಿರಲಿಲ್ಲ.]

ಪ್ರಿಯ ವಿಶ್ವಾಸಿಗಳೇ, ಪ್ಯಾರಿಸ್ ೧೮೯೦

ನನ್ನ ಈಗಿನ ಸ್ಥಿತಿ ವಿಚಿತ್ರವಾಗಿದೆ. ನಿಮ್ಮ ನೆನಪು ನನ್ನಲ್ಲಿ ಹುಚ್ಚು ಭಾವನೆಗಳನ್ನು ಎಬ್ಬಿಸುತ್ತದೆ. ನನ್ನ ಪಿತ್ತ ಪ್ರಕೃತಿ ವಿಕೋಪಸ್ಥಿತಿಗೆ ಏರುತ್ತಿದೆ. ನನ್ನ ದೇಹಾದ್ಯಂತವೂ ವಿಷವಾಯುವು ಸಂಚರಿಸುತ್ತಿರುವಂತೆನಿಸುತ್ತಿದೆ. ನನ್ನ ಹೊಟ್ಟೆಯಲ್ಲಿ ಎಷ್ಟೊಂದು ಕಲ್ಮಷವಿದೆಯೋ ಅವೆಲ್ಲವನ್ನೂ ಒಂದು ಸಲ ವಾಂತಿಮಾಡಿಕೊಳ್ಳಬೇಕೆನಿಸುತ್ತದೆ. ನನ್ನ ಈ ಅವರ್ಣನೀಯ ಬೇನೆ ತಲೆಯನ್ನೇ ಕೆಡಿಸಿದೆ. ನಾನು ಏನಾದರೂ ಯೋಚಿಸಿ ಬರೆಯಬೇಕಾದಾಗ ಒಂದು ಸಲ ಸಿಟ್ಟಿನಿಂದ ಚೀರದೆ ನೆಮ್ಮದಿಯಾಗುವದಿಲ್ಲ. ಡಾಕ್ಟರರು ನನ್ನ ಹೊಟ್ಟೆ ಕೆಟ್ಟಿದೆಯೆಂದು ಹೇಳುತ್ತಿರುವರು. ಹೊಟ್ಟೆಯೊಂದೇ ಏಕೆ ನನ್ನ ಎದೆ ಸಂಪೂರ್ಣ ನಾಶವಾಗಿದೆ. ನನ್ನಲ್ಲಿ ಕರುಣೆ, ಅಂತಃಕರುಣಗಳೆಂಬ ಭಾವನೆಗಳು ಮಾಯವಾಗತೊಡಗಿವೆ. ಜೀವಂತ ಇರುವವನ ಚರ್ಮವನ್ನು ಸುಲಿದರೆ ಯಾವ ಬಗೆಯ ನೋವು ಆಗಬೇಕೋ ಅದೇಬಗೆಯ ವೇದನೆ ಆಗುತ್ತಿದೆ.

ಲೋಕ ನನ್ನನ್ನು ನಿರ್ದಾಕ್ಷಿಣ್ಯ ಮನುಷ್ಯನೆಂದು ದೂರಬಹುದು. ನಾನು ಯಾವುದನ್ನೂ ಲಕ್ಷಿಸುತ್ತಿಲ್ಲವೆಂದು ಜರಿಯಬಹುದು. ಈ ನನ್ನ ವಿಕ್ಷಿಪ್ತ ಸ್ವಭಾವದ ಅರಿವು ನನಗಾಗಿದೆ. ಜಗತ್ತಿನ ಯಾವ ಚಲನವಲನದಲ್ಲಿ ಆಸ್ಥೆವಹಿಸಲು ಮನಸ್ಸಿಲ್ಲ. ಈ ಪ್ರಪಂಚದಿಂದ ದೂರ, ಬಹುದೂರ ಸರಿಯಲೇ ಎಂಬ ಅಭಿಲಾಷೆ ಉಂಟಾಗುತ್ತಿದೆ. ನನ್ನ ಒಳಮನಸ್ಸು "ಗಾಯ್ ಗಾಯ್, ನೀನು ಇನ್ನು ಈ ಬಾಹ್ಯ ಪ್ರಪಂಚದಿಂದ ದೂರಾಗು. ನಿನ್ನ ಆಕೃತಿ ವಿಕೃತರೂಪವನ್ನು ತಾಳುತ್ತಿರುವುದು. ನಿನ್ನ ಈ ವಿರೂಪವನ್ನು ಮತ್ತಾರಿಗೂ ತೋರಿಸಬೇಡ" ಎಂದು ಹೇಳುತ್ತಿದೆ. ಇಂದೇ ನನ್ನ ಡಾಕ್ಟರನು ಹೀಗೆ ಹೇಳಿರುವನು. "ಗಾಯ್ ನೀವು ಇನ್ನು ಮುಂದೆ ಬಹಳ ಎಚ್ಚರದಿಂದ ಇರಬೇಕು. ನೀವು ಮನೆಬಿಟ್ಟು ಹೊರಗೆ ಹೋಗಲೇಬಾರದು. ರಾತ್ರಿಗಳಲ್ಲಿ

ಕಂಡ, ಕಂಡ ಸ್ತ್ರೀಯರೊಂದಿಗೆ ರಮಿಸುವುದನ್ನು ಸಂಪೂರ್ಣವಾಗಿ ತೊರೆಯ ಬೇಕು.” ನನ್ನ ಶರೀರವು ಬಹಳ ನಿತ್ರಾಣಹೊಂದಿದೆ. ನಾನು ಎಚ್ಚರ ದಿಂದ ಇರಬೇಕು.

ಮಿತ್ರಳೇ, ಈ ಪತ್ರ ನಿನಗೆ ಬೇಸರವನ್ನುಂಟುಮಾಡುವುದು. ಆದರೆ ನಿನ್ನಲ್ಲಿಗೆ ನಾನು ಬಾರದೆ ಇರಲು ಕಾರಣ ತಿಳಿಯಲೆಂದು, ನನ್ನ ಅಂತ್ಯ ಕಾಲದ ಪರಮ ಆಪ್ತಮಿತ್ರಳೆಂದೂ ನಿನಗೆ ಬರೆದಿರುವೆನು. ಕ್ಷಮಿಸು.

ನಿನ್ನ ವಿಶ್ವಾಸಿಗ —**ಗಾಯ್**

— ೫೦ —

[ ಗಾಯ್‌ನ ದೇಹಾರೋಗ್ಯ ಬಹಳ ಹೀನಸ್ಥಿತಿಯಲ್ಲಿದ್ದರೂ ನಾಟಕಗಳನ್ನು ಬರೆದು ನಾಟಕ ಗೃಹಗಳಿಗೆ ಕೊಡತೊಡಗಿದ. ನಾಟಕಗಳು ಪ್ರದರ್ಶನಕ್ಕೆ ಸಿದ್ಧವಾದ ನಂತರ ಅವುಗಳ ಪ್ರದರ್ಶನ ನಡೆದಾಗ ನಿರ್ವಾಹವಿಲ್ಲದೆ ನೋಡಿಬರುತ್ತಿದ್ದ. “ಮೂಷೇ” ಎಂಬ ಇವನ ನಾಟಕವು ಮಾರ್ಚ ೧೮೯೧ ರಲ್ಲಿ ಮೊದಲನೆಯ ಸಲ ರಂಗಭೂಮಿಯ ಮೇಲೆ ಬಂತು. ಬಲು ಜನಪ್ರಿಯವಾಯಿತು. ಆ ಸಮಯದಲ್ಲಿ ತಾಯಿಗೆ ಬರೆದ ಪತ್ರ. ]

**ಮಮತೆಯ ತಾಯೆ,** ಪಾರಿಸ್ ೪-೩-೧೮೯೧

“ಮೂಷೇ” ಎಂಬ ನನ್ನ ನಾಟಕ ಬಲು ಚನ್ನಾಗಿದೆ. ನನ್ನ ಮನಸ್ಸು ಸಂತೋಷಗೊಂಡಿದೆ. ಇದೊಂದು ನನ್ನ ಉತ್ತಮ ಕೃತಿ. ನಾಟಕಗಳಿಂದ ನನಗೆ ಈಗ ಹೆಚ್ಚು ಹಣ ದೊರೆಯುತ್ತಿದೆ. ಮೊದಲಿನಿಂದಲೂ ಇವುಗಳನ್ನೇ ಬರೆದಿದ್ದರೆ ಒಳಿತಾಗುತ್ತಿತ್ತೇನೋ ಎಂದೆನಿಸುತ್ತದೆ. ಆದರೆ ನನಗೆ ಇಂತಹ ಕೀರ್ತಿ ತಂದುಕೊಟ್ಟದುದು ನನ್ನ ಜನಪ್ರಿಯ ಚಿಕ್ಕ ಕತೆಗಳೆಂಬುದನ್ನು ನಾನು ಮರೆತಿಲ್ಲ. ನನ್ನ ನೀಳ್ಗಪಿಕೆಗಳೂ ಸೊಗಸಾಗಿದ್ದವಲ್ಲವೆ? ಈ ನಾಟಕವನ್ನು ಇತರ ಕಂಪೆನಿಗಳು ನಾನಾ ದೇಶಗಳಲ್ಲಿ ಆಡಲು ಒಪ್ಪಿ ನನ್ನೊಂದಿಗೆ ಸಮ್ಮತಿ ಪಡೆದು ಹಣ ಮುಂಗಡವಾಗಿ ಕೊಟ್ಟಿರುವರು. ಇದರಿಂದ ನನಗೆ ಕೀರ್ತಿಯೂ, ಹಣವೂ ಹೇರಳವಾಗಿ ಬರುತ್ತಿವೆ. ನನ್ನ ಉತ್ತಮ ಕತೆಗಳೆಲ್ಲವನ್ನೂ ನಾಟಕಗಳನ್ನಾಗಿ ಪರಿವರ್ತಿಸಲು ಸಲಹೆ ಸೂಚನೆಗಳನ್ನು ಆಯಾ ನಾಟಕ ಕಂಪೆನಿ

ಗಳಿಗೆ ಕೊಟ್ಟಿರುವೆನು. ಎಷ್ಟೋ ಇನ್ನೂ ಕೆಲಸಗಳು ಉಳಿದಿವೆ. ನನ್ನ ಸಧ್ಯದ ದೇಹಸ್ಥಿತಿ ಈ ಎಲ್ಲ ಯೋಜನೆಗಳನ್ನು ತಡೆಯುತ್ತಿದೆ. ಬಂದುದಕ್ಕೆ ತಲೆಬಾಗುತ್ತಿರುವೆನು. ನಿನ್ನ ಆಶೀರ್ವಾದ ಬಲವಿರಲಿ ತಾಯಿ. ಇಕೋ ನನ್ನ ಪ್ರಣಾಮಗಳು.

ನಿಮ್ಮ ಪ್ರೀತಿಯ ಮಗ —**ಗಾಯ್**

— ೫೧ —

(೧೮೯೧ ರ ಬೇಸಿಗೆಯಲ್ಲಿ ಮೋಪಾಸಾ ಮತ್ತೊಂದು ಸುಂದರವಾದ ಕಾದಂಬರಿಯನ್ನು ಆರಂಭಿಸಿದ. ಅದರ ಹೆಸರು "ಚೆಲುವೆ'' (L'Angelus) ಎಂದು, ಇದರ ಮೊದಲಿನ ೫೦ ಪ್ರತಿಗಳನ್ನು ಬರೆಯುವದರಲ್ಲಿ ಅವನ ಮನೋದೌರ್ಬಲ್ಯ ಹೆಚ್ಚಾಯಿತು; ಮುಂದೆ ಈ ಕಾದಂಬರಿಯ ವಿಷಯ ಒಂದಕ್ಷರವನ್ನು ಸಹ ಬರೆಯುವದಾಗಲಿಲ್ಲ. ಅವರೆ ಪತ್ರವ್ಯವಹಾರವನ್ನು ಮಾತ್ರ ಮುಂದು ವರಿಸಲೇ ಬೇಕಿತ್ತು; ಅದೂ ತನ್ನ ಆಪ್ತ ಸೆಕ್ರೆಟರಿಯ ನೆರವಿನಿಂದ. ಈ ಕಾದಂಬರಿಯ ರೂಪರೇಷೆಯನ್ನು ಅವನ ಕವಿಮಿತ್ರನಾದ (Auguste Dorechian) ಆಗೋಸ್ಟ ದೋರಛೇಯ ಮುಂದೆ ಒಂದು ದಿನ ವಿವರಿಸಿದ. ಈ ಕಾದಂಬರಿಯ ಬಗ್ಗೆ ಪ್ರತ್ಯೇಕ ಲೇಖನವನ್ನೇ ಮತ್ತೊಂದು ಸಲ ಬರೆಯುವುದು ಲೇಸೆನಿಸುತ್ತದೆ. ಈ ಸಂದರ್ಭದಲ್ಲಿ ಗಾಯ್‌ನು ತನ್ನ ತಾಯಿಗೆ ಬರೆದ ಒಂದು ಪತ್ರ.)

**ನಲ್ಮೆಯ ತಾಯೆ,** ಪ್ಯಾರೀಸ ೧೮೯೧

ಹಾರ್ವೇಯ ಮರಣಾನಂತರ ನೀವು ಬಹಳ ನೊಂದುಕೊಂಡಿರುವಿರಿ. ಮೇಲೆ ನನ್ನ ದೇಹಾರೋಗ್ಯವೂ ಕೆಡುತ್ತಿರುವುದೆಂಬದು ನನ್ನ ಪತ್ರಗಳಿಂದಲೂ, ಇತರ ಮಿತ್ರರು ನಿಮಗೆ ಕಾಲಕಾಲಕ್ಕೆ ಸೂಚಿಸುತ್ತಿರುವ ಹೇಳಿಕೆಗಳಿಂದಲೂ ನೀವು ತಿಳಿದು ಕೊಂಡಿರಬಹುದು. ತಾಯೆ ನಿಮ್ಮದು ದುಃಖಮಯ ಜೀವನ. ನಮ್ಮ ಮುಂದಿನ ದಿನಗಳು ಎಂತಹವೋ ಯಾರು ಹೇಳಬಲ್ಲರು? ಈಗಲೇ ಹೆಚ್ಚು ಯೋಚಿಸಿ ಸುಮ್ಮನೇ ಕೊರಗಬೇಡಿ.

ನನ್ನ ಈ ನರಗಳ ನಿತ್ರಾಣದ ಬೇನೆ ಹೆಚ್ಚಾಗತೊಡಗಿದೆ. ಹೆಸರಾಂತ ಡಾಕ್ಟರುಗಳು ನನ್ನನ್ನು ಆರೈಸುತ್ತಿರುವರು. ನನಗೆ ಇಲ್ಲಿಯ ಈ ತಂಪು ಹವೆ

ಒಗ್ಗಲೊಲ್ಲದು. ನಾನು ಹೆಚ್ಚು ದುಡಿಯುವುದರ ಪರಿಣಾಮವಾಗಿ ಹೀಗೆ ನರಳುತ್ತಿರುವೆನೆಂದು ಎಲ್ಲರ ಅಭಿಪ್ರಾಯವಾಗಿದೆ. ನನ್ನ ಈ ಮಿತಿ ಮೀರಿದ ಬರವಣಿಗೆಯೇ ಈ ನರಗಳ ದುರ್ಬಲತೆಗೆ ಕಾರಣವೆಂದು ಅವರ ತರ್ಕ. ಇದು ಬರಹಗಾರರಿಗೆ, ಪ್ರಕಾಶಕರಿಗೆ, ಮತ್ತು ದೊಡ್ಡ ಪ್ರಮಾಣದ ವ್ಯಾಪಾರಿಗಳಿಗೆ ಬರುವ ಸರ್ವಸಾಮಾನ್ಯ ರೋಗವೆಂದು ಅವರ ಅಭಿಪ್ರಾಯ. ಇದೇನು ಅಷ್ಟು ಪ್ರಮಾದವಲ್ಲವೆಂದು ನನಗೆ ಧೈರ್ಯ ಹೇಳುತ್ತಿರುವರು. ನೀವೂ ಕೊಂಚ ಧೈರ್ಯವಾಗಿರಿ.

ಈ ವಾರ ನನಗೆ ಗುಣಮುಖ ವೆನಿಸಿದೆ. ಪ್ರಸಿದ್ಧ ಡಾಕ್ಟರ ಸ್ನೇಹಿತರು ನನ್ನನ್ನು ಆರೈಸುತ್ತಿರುವರು. ನನ್ನ ತೂಕ ಹೆಚ್ಚುತ್ತಿದೆ. ನಿಮಗೆ ಸುಳ್ಳು ಬರೆಯುತ್ತಿರುವೆನೆಂದು ಭಾವಿಸಬೇಡಿ. ನಿಮ್ಮ ಮುಂದೆ ನಾನು ಎಂದಿಗೂ ಸುಳ್ಳಾಡುವುದಿಲ್ಲ. ಡಿನವೂ ಸಂಜೆ ಕಾಲ್ನಡೆಗೆಯ ವ್ಯಾಯಾಮವನ್ನು ಪಡೆಯುತ್ತಿರುವೆನು. ನನ್ನ ಕಣ್ಣು ದೃಷ್ಟಿಯೂ ಸುಧಾರಿಸುತ್ತಿದೆ. ಈ ಪತ್ರವನ್ನು ನಾನೇ ಬರೆದಿದ್ದೇನೆ ಎಂದಮೇಲೆ ನೀವೇ ಊಹಿಸಿಕೊಳ್ಳಬಹುದು.

ಮತ್ತೊಮ್ಮೆ ತಮ್ಮನ್ನು ಕೇಳಿಕೊಳ್ಳುತ್ತೇನೆ; ತಾವು ಹೆಚ್ಚು ನೊಂದುಕೊಳ್ಳಬಾರದು. ನಿಮ್ಮಿಂದ ಈ ಭರವಸೆ ದೊರತರಲ್ಲದೆ ನನ್ನ ಪರಿಸ್ಥಿತಿ ಸುಧಾರಿಸದು. ಈಗ ನಿಮ್ಮ ಪ್ರಕೃತಿಯೂ ಉತ್ತಮ ಗೊಳ್ಳುತ್ತಿರುವುದೆಂದು ನನ್ನ ಭಾವನೆ. ಪತ್ರ ಬರೆಯುವಿರಾ?

ನಿಮ್ಮ ಪ್ರೇಮದ ಪ್ರತಿರೂಪ---**ಗಾಯ್**

– ೫೨ –

[ ೧೮೯೧ ರ ಬೇಸಗೆಯ ದಿನಗಳಲ್ಲಿ ಗಾಯ್‌ನು ತನ್ನ ತಾಯಿಗೆ ಬರೆದ ಪತ್ರಗಳು ಹೆಚ್ಚು ಶ್ರಮವಹಿಸಿ ಬರೆದವುಗಳು. ತಾಯಿಯು ಅಧೈರ್ಯಪಡಬಾರದೆಂಬ ಒಳ್ಳೇ ಉದ್ದೇಶದಿಂದ ಬರೆದವುಗಳು. ಇದೇ ಸಮಯಕ್ಕೆ ಇವನು ತನ್ನ ಆತ್ಮೀಯ ಗೆಳತಿಯೊರ್ವಳಿಗೆ (ಅವಳ ಹೆಸರು ಇತರ ವಿವರಗಳು ತಿಳಿದಿಲ್ಲ.) ಬರೆದ ಪತ್ರಗಳಲ್ಲಿ ತಪ್ಪುತಡೆಗಳು ಬಹಳ ಇವೆ. ಅಂತಹ ಪತ್ರಗಳಲ್ಲಿ ಇದೊಂದು. ]

ಪ್ರಿಯ ಗೆಳತಿಯೇ, ಪ್ಯಾರಿಸ್ ೧೮೯೧

ನಾನು ನಿನ್ನನ್ನು ಕಾಣಬಾರದೆಂದು ಡಾಕ್ಟರರ ಕಟ್ಟಪ್ಪಣೆಯಾಗಿದೆ. ಆದುದರಿಂದಲೇ ಈ ಪತ್ರ. ನನ್ನದು ಅರಣ್ಯರೋದನೆಯಾಗಿದೆ. ನಾನು ಸ್ವೇಚ್ಛೆಯಾಗಿ ಅಳುವುದಕ್ಕೂ, ಚೀರುವುದಕ್ಕೂ ಅನುವಿಲ್ಲದಂತಾಗಿದೆ. ಯಾರಿಗೂ ಹೇಳದೇ ಜನರಿಲ್ಲದ ಪ್ರದೇಶಕ್ಕೆ ಓಡಿಹೋಗಬೇಕೆನಿಸುತ್ತದೆ. ಅದು ಈಗ ಸಾಧ್ಯವಿಲ್ಲ. ಹೀಗೇನಾದರೂ ನಾನು ಮಾಡಿದರೆ ಶಾಂತಿ ದೊರೆಯ ಬಹುದೇನೋ?

ಕತ್ತಲಿನಲ್ಲಿ, ವಿಹರಿಸುವವನಂತಾಗಿದೆ ನನ್ನ ಅವಸ್ಥೆ. ಯೋಚಿಸಿದಂತೆಲ್ಲ ನನ್ನ ಆ ಕತ್ತಲ ಪ್ರಪಂಚ ಇನ್ನಿಷ್ಟು ದು:ಖಮಯವಾಗುವುದಲ್ಲದೆ ನನಗೆ ದಾರಿಕಾಣದಂತಿದೆ. ಕೆಲವು ದಿನಗಳಲ್ಲಿ ರಿವೇರಾಕ್ಕೆ ಹೋಗುವೆನು. ವಿಶ್ವಾಸವಿರಲಿ. ಪತ್ರಗಳ ಮೂಲಕವೇ ನಮ್ಮಲ್ಲಿ ಮಾತು: ಇದಲ್ಲದೆ ಮತ್ತೇನು ಸಾಧ್ಯ?

ನಿನ್ನ ಅಕ್ಕರೆಯ ಗೆಳೆಯ---**ಗಾಯ್**

– ೫೩ –

[ ಗಾಯ್‌ನ ಅನೇಕ ಕತೆಗಳನ್ನು ವಿದೇಶದ ಜನರು ಹಣ ವೆಚ್ಚಮಾಡಿ ಅವುಗಳನ್ನು ನಾಟಕಕ್ಕೆ ಪರಿವರ್ತಿಸಿ ಉಪಯೋಗಿಸಿಕೊಂಡರು. ಇಂತಹ ಒಂದು ಸನ್ನಿವೇಶ ಅವನ "ಮೃತ್ಯುಪತ್ರ" (The will) ಎಂಬ ಕತೆಯನ್ನು ಅಮೇರಿಕೆಯನ್ನರು ಕದ್ದಾಗ ಅವರ ಮೇಲೆ ದಾವೆ ಮಾಡಬೇಕೆಂದು ತನ್ನ ವಕೀಲರಾದ (Jacob) ಜೇಕಬ್‌ರಿಗೆ ಬರೆದ ಪತ್ರ ಇದು. ]

ಮಾನ್ಯ ಜೇಕಬರೇ, ೫-೧೧-೧೮೯೧

ಅಮೇರಿಕೆಯ 'ಸ್ಟಾರ್' ಪತ್ರಿಕೆ ನನ್ನ ಕತೆಯನ್ನು ವಿಕೃತಗೊಳಿಸಿ ಪ್ರಕಟಿಸಿರುವರು. ಅಂತಹ ಕತೆ ನನಗೆ ಅಪಕೀರ್ತಿ ತರುವುದು. ನಾನು ಮುನ್ನೂರು ಕತೆಗಳನ್ನು ಬರೆದಿರುವೆನು. ಆದರೆ ಇಂತಹ ಕೀಳುದರ್ಜೆಯ ಕತೆ ಬರೆದಿಲ್ಲ. ನನ್ನ ಹೆಸರು ಇದರಿಂದ ಪ್ಯಾರಿಸದಲ್ಲಿ ಕೆಡುವ ಸಂಭವವಿದೆ.

ಕಾರಣ ಅವರ ಮೇಲೆ ಮಾನನಷ್ಟದ ದಾವೆ ಹಾಕಲು ನಿಮಗೆ ಅಧಿಕಾರವನ್ನಿತ್ತಿರುವೆನು. ಇಲ್ಲಿ ನನ್ನ ತೀರ ಸಣ್ಣ ಲೇಖನಕ್ಕೆ ೫೦೦ ಫ್ರಾಂಕುಗಳು ದೊರೆಯುತ್ತಿವೆ. ಹೀಗೆ ಈ ಅಮೇರಿಕನ್ನರು ನನ್ನ ಹೆಸರನ್ನು ಕೆಡಿಸುವುದರಿಂದ ಅವರು ನನಗೆ ಮಾನನಷ್ಟ ಕೊಡಬೇಕಾಗುತ್ತದೆ. ಪತ್ರ ಬರೆಯಿರಿ. ವಿಚಾರಮಾಡಿ.

ತಮ್ಮ ವಿಶ್ವಾಸಿಗ —ಗಾಯ್

[ಅಮೇರಿಕೆಯಲ್ಲಿ ದಾವೆ ಮಾಡುವುದಕ್ಕೆ ಹಣ ಹೆಚ್ಚು ಬೇಕಾದುದರಿಂದಲೂ ಈ ಸಮಯಕ್ಕೆ ಆ 'ಸ್ಟಾರ್' ಪ್ರಕಾಶಕರ ಕಂಪನಿಯು ಮುಳುಗಿಹೋದುದರಿಂದಲೂ ಈ ದಾವೆಯ ಪ್ರಕರಣ ಅಲ್ಲಿಗೇ ನಿಲ್ಲಿಸಲಾಯಿತು.]

# ಗಾಯ್‌ನು ಆರೋಗ್ಯಕ್ಕಾಗಿ ಅಲೆಯುವಾಗ ಬರೆದ ಪತ್ರಗಳು

– ೫೪ –

[ತನ್ನ ಬೇನೆಯು ಬಹಳ ವಿಕೋಪಕ್ಕೇರಲು ಗಾಯ್‌ನು ಮುಂದೇನೂ ಬರೆಯಲಾಗಲಿಲ್ಲ. ತನ್ನ ಆತ್ಮೀಯ ಪ್ರಕಾಶಕರೊಬ್ಬರಿಗೆ ಬರೆದ ಪತ್ರ ಇದು. ಅವನ ಅನಿಶ್ಚಿತ ಮನಸ್ಸು, ಬೇನೆಯ ತೀವ್ರವಾದ ವೇದನೆಯ ಮುಂತಾದವುಗಳನ್ನು ವ್ಯಕ್ತಗೊಳಿಸುತ್ತದೆ. ಕಳಿಸುವೆನೆಂದು ವಾಗ್ದಾನವಿತ್ತ ಲೇಖನಗಳನ್ನು ಅವನು ಬರೆಯಲೇ ಇಲ್ಲ. ಬಹಳ ಗೊಂದಲದಲ್ಲಿದ್ದವನ ಮನೋವಿಕಾರವನ್ನು ಈ ಪತ್ರ ತೋರಿಸುತ್ತದೆ.)

ದಿಯೋಸ್ ೧೮೯೧

ಮಾನ್ಯರೇ,

ಇಂದು ನಾನೊಂದು ರೀತಿಯ ನಿಶ್ಚಯಕ್ಕೆ ಬಂದಿದ್ದೇನೆ. ಇನ್ನು ಮುಂದೆ ನಾನು ಯಾವ ಬಗೆಯ ಕತೆಗಳನ್ನಾಗಲೀ, ಚಿಕ್ಕ ಕಾದಂಬರಿಗಳನ್ನಾಗಲೀ, ಬರೆಯುವುದಿಲ್ಲ. ಈಗಾಗಲೇ ಹೆಚ್ಚು ಬರೆದಿರುವೆನು. ಜನರೂ ಬೇಸರಗೊಂಡಿರಬಹುದು. ಸಾಧ್ಯವಾದರೆ, ಕಾದಂಬರಿಗಳನ್ನೇ ಬರಿಯುವೆನು. ಕೈಯಲ್ಲಿರುವ ಈ ಕಾದಂಬರಿ ಮುಗಿದಕೂಡಲೇ ಪ್ರವಾಸದ ಲೇಖನಗಳನ್ನೂ ತಮಗೆ ಕೊಡಬೇಕೆಂದು ನಿಶ್ಚಯಿಸಿರುವೆನು. ಅನೇಕ ಜನರು ನನ್ನ ಕೃತಿಗಳನ್ನು ಬೇಡುತ್ತಿರುವರು. ಆದರೆ ಯಾರ ಬೇಡಿಕೆಯನ್ನೂ ನಾನು

ಪೂರೈಸುವಸ್ಥಿತಿಯಲ್ಲಿಲ್ಲ. ನನ್ನ ಸಾಹಿತ್ಯ ಮಿತ್ರರಾದ ಟರ್ಗನೋವ್, ಝೂಲಾ, ಮುಂತಾದವವರ ವ್ಯಕ್ತಿಚಿತ್ರಗಳನ್ನು ಬರೆದು ಕಳಿಸುವೆನು. ನಾಳೆಬನ್ನಿ. ನಿಮಗೆ ಕೆಲವೊಂದು ಈ ಬಗೆಯ ಲೇಖನಗಳನ್ನು ಕೊಡುವೆನು. ಮಮತೆ ಇರಲಿ. ನನ್ನ ಈ ಅನಿಶ್ಚಿತ ಜೀವನಕ್ಕೆ ತಾವು ಬೇಸರ ಪಟ್ಟುಕೊಳ್ಳಬೇಡಿ. ನಮಸ್ಕಾರ.

ನಿಮ್ಮ ವಿಶ್ವಾಸದ—**ಗಾಯ್**

– ೫೫ –

(ಪ್ರದೇಶ ರಿವೇರಾಕ್ಕೆ ಹೋದನಂತರ ಗಾಯ್‌ನ ಬೇನೆ ಅಲ್ಲಿಯ ಉಷ್ಣ ಹವೆಗೆ ಹೆಚ್ಚಿತು. ಅಲ್ಲಿಂದ ತನ್ನ ಡಾಕ್ಟರ್ ಮಿತ್ರನಾದ ಹೆನ್ರೀ ಕಾಜೇಲ್‌ರಿಗೆ ಬರೆದ ಪತ್ರ.)

**ಪ್ರಿಯ ಡಾಕ್ಟರ ಕಾಜೇಲ್‌ರೇ,** ಡಿವೋನ್ ೧೮೯೧

ನನ್ನ ಬೇನೆ ಇಲ್ಲಿ ಹೆಚ್ಚಾಗತೊಡಗಿದೆ. ಭೂವಲಯದ ಯಾವ ಪ್ರದೇಶಕ್ಕೂ ಹೋದರೂ ನನಗೆ ಅನುಕೂಲೂವಾಗುವ ಹವೆ ದೊರೆಯದಂತಿದೆ. ನಾನು ಈ ಭೂವಲಯದ ಮೇಲೆ ಇರುವುದೇ ಕಷ್ಟವೆನಿಸುತ್ತದೆ. ಈಗ ಡಿವೋನದಲ್ಲಿರುವೆ. ಇದೊಂದು ಉತ್ತಮ ಆರೋಗ್ಯ ಸ್ಥಳವೆಂದು ಹೆಸರಾಗಿದ್ದರೂ ಇದನ್ನು ತೊರೆಯಬೇಕಾಗಿದೆ; ಇಲ್ಲಿಯ ಸಮುದ್ರದ ತಂಪುಹವೆ ಮತ್ತು ಬಿರುಗಾಳಿಗೆ ನನ್ನ ತಲೆನೋವು ಹೆಚ್ಚಾಗುತ್ತಿದೆ. ಈಗ ನನಗೆ ಅನೇಕ ರಾತ್ರಿಗಳಲ್ಲಿ ಪೂರ್ಣ ನಿದ್ರೆಯೇ ಇಲ್ಲ.

ನನ್ನ ಮನಸ್ಸು ವ್ಯಾಯಾಮವನ್ನು ಬಯಸುತ್ತಿದೆ. ಆದರೆ ಒಂದೆಡೆ ಸುಮ್ಮನೇ ಕುಳಿತುಕೊಳ್ಳಬೇಕಾದವನಿಗೆ ವ್ಯಾಯಾಮ ದೊರೆಯುವುದೆಂತು? ನನಗೇನೂ ತೋಚದಂತಾಗಿದೆ. ಎಂತಹ ವ್ಯಾಯಾಮ ಮಾಡಲಿ? ಕಾಲ್ನಡಗೆಯೇ? ಪ್ರವಾಸವೇ? ಎಲ್ಲಿಗೆ? ಹೇಗೆ? ಎಲ್ಲವನ್ನೂ ಸುತ್ತಿಬಂದೆ. ಯಾವ ಪ್ರದೇಶವೂ ನನ್ನ ಪ್ರಕೃತಿಗೆ ಸಮಾಧಾನವನ್ನು ನೀಡುತ್ತಿಲ್ಲ. ನನ್ನ ಶರೀರ ದುರ್ಬಲಗೊಂಡಿಲ್ಲ. ಆದರೆ ಮನಸ್ಸು ಬಹಳ ನೊಂದುಕೊಂಡಿದೆ; ತಲೆ ಭಾರವಾಗುತ್ತಿದೆ. ಗುಂಡು ಹಾಕಿಕೊಂಡು ಪ್ರಾಣವನ್ನು ನೀಗಿಕೊಳ್ಳಲೇ

ಎಂದೆನಿಸುತ್ತಿದೆ. ಓದುವುದಾಗುತ್ತಿಲ್ಲ; ಬರೆಯುವ ಮಾತಂತೂ ಇಲ್ಲವೇ ಇಲ್ಲ. ಕಣ್ಣಿದ್ದೂ ಕುರುಡನಂತಿರುವೆನು. ದೇವರು ಈ ಜೀವನವನ್ನೂ ಎಂದು ಮುಗಿಸುವನೋ ನೋಡಬೇಕು.

ಬೇಸರ ಪಟ್ಟುಕೊಳ್ಳಬೇಡಿ ಡಾಕ್ಟರರೆ; ಬೇಗ ಪ್ಯಾರೀಸಕ್ಕೆ ಬಂದು ಬಿಡುವೆ. ನಿಮ್ಮ ದರ್ಶನಕ್ಕೆ ನನ್ನ ಮನಸ್ಸು ಹಾತೊರೆಯುತ್ತಿದೆ.

ನಿಮ್ಮ ಸ್ನೇಹಿತ—**ಗಾಯ್**

**– ೫೬ –**

(ರಿವೇರಾ ಪ್ರದೇಶದಲ್ಲಿ ವಿಶ್ರಾಂತಿ ಪಡೆಯುತ್ತಲಿದ್ದ ಗಾಯ್‌ನು ತನ್ನ ಪರಮ ಮಿತ್ರನೂ ಡಾಕ್ಟರರೂ ಆದ ಡಾ. ಕಾಜೇಲ್‌ರಿಗೆ ಬರೆದ ಮತ್ತೊಂದು ಪತ್ರ.)

**ಮಿತ್ರ ಡಾಕ್ಟರರೇ,** ರಿವೇರಾ ೧೮೯೧

ಇಂದು ನಾನಿಲ್ಲಿಗೆ ಬಂದಿದ್ದೇನೆ. ನನ್ನ ಹೆತ್ತವರನ್ನು ಕಾಣಲು ಬಂದಿರುವೆನು. ಇದು ನನ್ನ, ಮತ್ತು ಅವರ ಅಂತ್ಯ ಮಿಲನವೇನೋ ಎಂಬಂತೆ ನನ್ನ ಮನಸ್ಸು ಹೇಳುತ್ತಿದೆ. ಈ ಬಗೆಯ ಭಾವನೆ ಏಕೆ ಬಂದಿತೋ ನಾನು ಹೇಳಲಾರೆ. ತಾಯಿ ನನ್ನನ್ನು ಅಮಿತ ಪ್ರೀತಿ ವಿಶ್ವಾಸದಿಂದ ತಬ್ಬಿಕೊಂಡು "ಮಗನೇ ನೀನು ಬಹಳ ಬಳಲಿರುವಿ. ಈ ವರುಷ ಛಳಿ ಮತ್ತು ಮಳಿಗಾಲದಲ್ಲಿ ಹೇಗೆ ಕೆಲಸಮಾಡುವೆ? ನಿನ್ನ ಮುಖದ ಮೇಲೆ ಗೆಲುವಿನ ಛಾಯೆಯೇ ಇಲ್ಲ." ಎಂದು ನನ್ನನ್ನು ಸಂತೈಸಿದಳು. ಇಲ್ಲಿಂದ ಎಲ್ಲಿಗಾದರೂ ಕೊಂಚ ಬೆಚ್ಚನ ಹವೆ ಇರುವ ಸ್ಥಳಕ್ಕೆ ಹೋಗಬೇಕು. ಹೋಗುವುದೆಲ್ಲಿಗೆಂಬದನ್ನು ನಿಶ್ಚಯಿಸಿ ಬರೆಯುವೆನು. ಸ್ವಲ್ಪ ಬೆಳಕು ಸಹ ಸಹಿಸುವ ಶಕ್ತಿ ನನ್ನ ಕಣ್ಣಿಗಿಲ್ಲ. ನನ್ನ ಮನಸ್ಸೆಲ್ಲ ನಿರುತ್ಸಾಹದಿಂದ ತುಂಬಿಕೊಂಡಿದೆ. ಇಲ್ಲಿ ತಣ್ಣನ ಮಂಜಿನಿಂದ ತುಂಬಿದಗಾಳಿ ಬೀಸುತ್ತದೆ. ಚುಕ್ಕಾಡುಗಳ ಕಾಟ ಹೇಳತೀರದು. ಬಹಳವಾದರೆ ಕೇನ್ಸಗೇ ಹೋಗಬಹುದು. ಅಲ್ಲಿಂದ ಅನುಕೂಲವಾದರೆ ನಾನೇ ಪತ್ರ ಬರೆಯುವೆ; ಇಲ್ಲವಾದರೆ ಫ್ರಾಂಕೋನಿಂದ ಬರೆಯಿಸುವೆ.

ನಿಮ್ಮ ಸ್ನೇಹಿತ—**ಗಾಯ್**

– ೫೭ –

[ಕೇನ್ಸದಿಂದ ಓರ್ವ ಸ್ನೇಹಿತನಿಗೆ (ಅವನು ಪತ್ರಿಕಾ ಪ್ರತಿನಿಧಿಯೇ ಆಗಿರಬೇಕು) ಬರೆದ ಪತ್ರ. ಗಾಯ್‌ನ ನರಗಳ ದೌರ್ಬಲ್ಯ ಹೆಚ್ಚಿ ಕೊಂಡದಂತೆ ಅವನ ಮನಸ್ಸು ಹೆಚ್ಚು ಚಂಚಲವಾಗುತ್ತಿತ್ತು ಎಂಬುದು ಇದರಿಂದ ವಿದಿತವಾಗುತ್ತದೆ.]

ಮಿತ್ರನೇ, ಕೇನ್ಸ ೧೮೮೧

ಸಲಹೆಗಳೊಂದಿಗೆ ಕೂಡಿದ ನಿಮ್ಮ ಪತ್ರ, ತಲುಪಿತು. ನನ್ನ ಕತೆಗಳನ್ನು ಇನ್ನುಮುಂದೆ ನಾಟಕಗಳಿಗೆ ಉಪಯೋಗಿಸಲು ನಾನು ಎಂದಿಗೂ ಒಪ್ಪುವುದಿಲ್ಲ. ಹೀಗೆ ಮಾಡುವದರಿಂದ ನಾನು ನನ್ನ ಅಂತಸ್ತನ್ನು ಮಾರಿಕೊಂಡಂತೆಯೇ ಸರಿ. ನಾಟಕಕ್ಕೆ ನನ್ನ ಕೃತಿಯು ಪರಿವರ್ತಿಸಲ್ಪಟ್ಟಿತೆಂದರೆ ನನ್ನ ಜೀವನವೇ ಹಾಳಾದಂತೆ. ಕಾದಂಬರಿಯಲ್ಲಿ ಬರಹಗಾರನು ಓದುಗರೊಂದಿಗೆ ತಾನೇಸ್ವತಃ ಮಾತನಾಡುವನು. ನಮ್ಮ ನಡುವೆ ಪರಸ್ಪರ ಹೆಚ್ಚು ಸಂಬಂಧ ಬೆಳೆಯುವುದು. ಆ ಸಲುಗೆ, ಮತ್ತು ಸ್ನೇಹ ದಿನೇ ದಿನೇ ಬೆಳೆಯುತ್ತವೆ. ನನ್ನ ಶೈಲಿ, ನನ್ನ ಮಾತುಗಳು, ಜೀವಂತ ಓದುಗರೊಂದಿಗೆ ಬಾಂಧವ್ಯವನ್ನು ಬೆಳೆಸುತ್ತವೆ. ಆದರೆ ನಾಟಕದ ರೀತಿಯೇ ಬೇರೆ.

ಇದಕ್ಕೆ ನಿಮ್ಮ ನಿರ್ಧಾರವೇನು? ಅವುಗಳನ್ನು ಸಾಮಾನ್ಯ ವರ್ಗದ ನಟ-ನಟಿಯರೊಂದಿಗೆ ನೀವು ನಾಟಕವನ್ನು ಆಡಿಸಿದಲ್ಲಿ ಬರಹಗಾರನನ್ನು ನೀವು ಕೊಂದಂತೆಯೇ ಸರಿ. ಈ ಕೆಲಸ ಕೇವಲ ಹಣದಾಸೆಗೆ ಕೃತಿಕರ್ತನು ತನ್ನನ್ನು ತಾನೇ ಮಾರಿಕೊಳ್ಳಬೇಕಾಗುವುದು. ಇದು ನನಗೆ ಸರಿಬೀಳದು. ಮಹಾಶಯರೇ ಮತ್ತೊಮ್ಮೆ ಈ ವಿಷಯುಗಳ ಬಗ್ಗೆ ನನಗೆ ಬರೆಯಬೇಡಿ. ಕೃತ್ರಿಮ ಜಗತ್ತಾಗಿ ತೋರುವ ರಂಗಭೂಮಿಯ ಮೇಲೆ ಪ್ರದರ್ಶನಕ್ಕೆ ನನ್ನ ಕೃತಿಗಳನ್ನು ಸರ್ವಥಾ ನಾನು ಕೊಡುವದಿಲ್ಲ.

ಮತ್ತೆ, ಮತ್ತೆ, ನನ್ನನ್ನು ಕಾಡಬೇಡಿ.

ನಿಮ್ಮ ವಿಶ್ವಾಸಿಗ—**ಗಾಯ್**

– ೫೮ –

[ಗಾರ್ಯ್‌ನು ಹೆಚ್ಚು ಪ್ರಶಂಸೆ ಪಡೆಯಬೇಕೆಂಬ ಆಶೆಯುಳ್ಳವನಲ್ಲ. ಇಂತಹ ಸಂದರ್ಭಗಳು ಬಂದರೆ ತಪ್ಪಿಸಿಕೊಳ್ಳುತ್ತಿದ್ದ. ಇದೇ ರೀತಿಯಲ್ಲಿ ತನ್ನನ್ನು ಸಾಹಿತ್ಯ ವಿಷಯವಾಗಿ ಅನೇಕ ಪತ್ರಿಕಾಕರ್ತರು, ಪ್ರವಾಸಿಗಳು, ಬರಹಗಾರರು,ಪ್ರಕಾಶಕರು, ಸಂದರ್ಶನಗಳಿಗೆ ಬಂದರೆ ಅವನು ಆಸಕ್ತಿಯನ್ನೇ ತೋರುತ್ತಿರಲಿಲ್ಲ. ಅವರೊಂದಿಗೆ ಸರಿಯಾಗಿ ಮಾತನಾಡುವುದೂ ಕಡಿಮೆ. ಈ ಬಗೆಯ ಪ್ರಚಾರದಲ್ಲಿ ಅವನಿಗೆ ನಂಬುಗೆ ಇರಲಿಲ್ಲ. ಆದರೆ ಕಲಾವಿದರನ್ನು ಕಂಡರೆ ಅವರನ್ನು ಸಂತೋಷದಿಂದ ಬರ ಮಾಡಿಕೊಂಡು ತನ್ನ ಶಕ್ತಿಮೀರಿ ಆದರಿಸುತ್ತಲಿದ್ದ. ತನ್ನ ಬಗ್ಗೆ ಅವರು ಹೆಚ್ಚು ತಿಳಿಯಲು ಬಯಸಿದರೆ "ನಾನೇನು ಹಿರಿಯ ಸಾಹಿತಿಯಲ್ಲ. ನನ್ನದು ಬರೆಯುವ ಕೆಲಸ; ನನ್ನ ಜೀವನದ ಕಸಬು" ಎಂದು ಹೇಳುತ್ತಿದ್ದ. ರಿವೇರಾದಿಂದ ಓರ್ವ ರಷಿಯಾ ದೇಶದ ಕಲಾವಿದೆಗೆ ಇವನು ಬರೆದ ಕಡೆಯ ಪತ್ರ ಇದು.]

**ಪ್ರಿಯ ಸ್ನೇಹಿತರೇ,**

ನಿಮ್ಮ ಹೆಣ್ಣಿನ ಚಿಂತೆಯೇ ಹೀಗೆ. ಜನರನ್ನು ಕಾಡುವುದು ನಿಮ್ಮ ಹುಟ್ಟು ಗುಣ. ಇದೇ ನಿಮಗೆ ನಾನು ಬರೆಯುವ ಕಡೆಯ ಪತ್ರ. ನಿಮಗೆ ನಮ್ಮಂತಹ ಬರಹಗಾರರ ಜೀವನದ, ದಿನದ ಕಾರ್ಯಕ್ರಮದ ವಿವರ ತಿಳಿಯದು. ತಿಳಿಯಲು ನೀವು ಯತ್ನಿಸುವುದೂ ಇಲ್ಲ.

ನೀವು ನನ್ನ ಜೀವನದ ಬಗ್ಗೆ ತಿಳಿಯ ಬಯಸಿರುವ ಪ್ರಶ್ನೆಗಳಿಗೆ ನಾನು ಉತ್ತರ ಬರೆಯುವುದಿಲ್ಲ. ಇಷ್ಟೊಂದು ವಿವರಗಳಿಂದ ನಿಮಗೇನು ಆಗಬೇಕಾಗಿದೆ? ಇದಲ್ಲದೆ ನನ್ನ ಜೀವನದ ರಹಸ್ಯದ ವಿವರಗಳು ನನ್ನ ತಾಯಿಗಲ್ಲದೆ ಮತ್ತಾರಿಗೂ ತಿಳಿದಿರುವದಿಲ್ಲ; ಅವುಗಳು ಅತಿ ರಹಸ್ಯವಾಗಿಯೇ ಉಳಿಯಬೇಕೆಂದು ನನ್ನ ಆಸೆ. ನಾನೋರ್ವ ಹುಂಬ; ಗುಡ್ಡಗಾಡಿನ ಮನುಷ್ಯ; ಕಲ್ಪನಾ ಪ್ರಪಂಚದಲ್ಲಿ ವಿಹರಿಸುವವನು. ಜೀವನಕ್ಕಾಗಿ ದುಡಿಯುವುದೇ ನನ್ನ ಕೆಲಸ. ಈಗ ನಾಲ್ಕಾರು ವರ್ಷಗಳಿಂದ ನಾನೋರ್ವ ಹುಚ್ಚನಂತೆ ನಾನಾ ದೇಶದಲ್ಲಿ ಸತತ ಅಲೆಯುತ್ತಿರುವೆನು. ನನ್ನ ಚಲನ ವಲನಗಳು ಆ ನನ್ನ ಹೆತ್ತತಾಯಿಗೆ ಮಾತ್ರ ತಿಳಿಯಪಡಿಸುತ್ತಿರುವೆನು.

ನನ್ನ ಪರಿಚಯ ಪ್ಯಾರಿಸದಲ್ಲಿಯೂ ಹೆಚ್ಚಿನ ಜನರಿಗೆ ಆಗಿಲ್ಲ. ಕೆಲವು ವಿಜ್ಞಾನಿಗಳು, ಬರಹಗಾರರು, ಕಲಾವಿದರು, ನಟ-ನಟಿಯರು, ಶ್ರೀಮಂತ

ರಲ್ಲಿ ಮುಖ್ಯರು, ಇವರುಗಳ ಪರಿಚಯು ಮಾತ್ರ ನನಗಿದೆ. ಪದ್ಯದ ಬರಹ ಗಾರರ ಬಗ್ಗೆ ಒಂದು ಮಾತು; ಇವರಲ್ಲಿ ಪರಸ್ಪರ ವೈಷಮ್ಯ ಬೆಳೆಯುತೊಡಗಿದೆ; ಇದು ಬಲು ಶೋಚನೀಯುವಾದ ವಿಷಯ. ನಮ್ಮ ಅಧೋಗತಿಗೆ ಕಾರಣ ವಾಗಬಹುದು. ಈ ಬೇಗೆಯನ್ನು ಬೇಗ ಆರಿಸಲು ಯತ್ನಿಸಿರಿ ಅಂದರೆ ನನಗೆ ಶಾಂತಿದೊರೆಯುವುದು. ಇದು ನನ್ನ ಕಡೆಯ ವಿಜ್ಞಾಪನೆ.

ನನ್ನ ಬಗ್ಗೆ ಯಾರೂ, ಏನನ್ನೂ, ಬರೆಯಕೂಡದು. ನನ್ನ ಒಪ್ಪಿಗೆ ಯಿಲ್ಲದೆ ಯಾವ ಪತ್ರಿಕಾ ಕರ್ತನು ಏನನ್ನೂ ನನ್ನಬಗ್ಗೆ ಪ್ರಕಟಿಸಬಾರದೆಂದು ಕೇಳಿಕೊಂಡಿರುವೆನು. ಈ ವಿಲಕ್ಷಣ ಸ್ವಭಾಕ್ಕೆ ನಗಬೇಡಿ. ಈಗ ಏನಾದರೂ ಪ್ರಕಟವಾಗಿದ್ದರೆ ಅವುಗಳು ನಿಜಾಂಶಗಳಲ್ಲ. ನನ್ನ ವ್ಯಕ್ತಿತ್ವವನ್ನು ಜನರು ನನ್ನ ಪುಸ್ತಕಗಳಿಂದಲೇ ತಿಳಿದು ಕೊಳ್ಳಬೇಕೆಂದು ಆಶಿಸುತ್ತೇನೆ. ಇದೇ ನನ್ನ ಸಾಹಿತ್ಯ ಜೀವನದ ಮುಖ್ಯ ಉದ್ದೇಶ. ಸರಕಾರವು ನನಗೆ ಲೀಜಿಯನ್-ಆಫ್-ಆನರ್‌ದ (Legion of Honour) ಮರ್ಯಾದೆಯನ್ನು, ಆಕೇಡೆಮಿಯಲ್ಲಿ ಸನ್ಮಾನವನ್ನು ಮಾಡಲು ಯತ್ನಿಸಿದಾಗ ಅದೆಲ್ಲವನ್ನು ತಡೆದು ನಿಲ್ಲಿಸಿದೆ. ಬೇಡೆಂದು ದೂರ ಸರಿದು ನಿಂತೆ. ಏಕೋ ಜನರಿಂದ ದೂರ ಇರಬೇಕೆನಿಸುತ್ತದೆ. ಈ ಎಲ್ಲ ಬಂಧನಗಳಿಂದ ಅನತಿ ದೂರದಲ್ಲಿದ್ದು ಬರಹದಲ್ಲಿಯೇ ಮಗ್ನನಾಗಬೇಕೆಂದು ನನ್ನ ಆಶೆ. ನನಗೆ ಪ್ರಿಯವಾದವುಗಳು, ನನ್ನ ದೋಣಿ, ಲಾ–ಗೂವೇದಲ್ಲಿ ನದಿಯ ದಂಡಿಯ ಮೇಲಿರುವ ನನ್ನ ಸುಂದರ ಮನೆ, ಮತ್ತು ಹಳ್ಳಿಯ ಜೀವನ; ಕೆಲ ಸಮಯ ಪ್ಯಾರಿಸದಲ್ಲಿದ್ದಾಗದು. ನನ್ನ ಕತೆಗಳಿಗೆ ವಿಷಯ ಸಂಗ್ರಹದ ಕೆಲಸದಲ್ಲಿಯೇ ನನ್ನ ಸುತ್ತಮುತ್ತಲಿನ ವಾತಾವರಣದ ಅನೇಕ ಜೀವನದ ಸತ್ಯಾಂಶಗಳೇ ನನ್ನ ಕತೆಗಳಿಗೆ ವಿಷಯುಗಳಾಗಿವೆ. ನಿಮಗೆ ನನ್ನ ಫೋಟೋ ಕಳಿಸಿರುವೆನು; ನೀವು ನನ್ನನ್ನು ಅನೇಕ ರೀತಿಯಿಂದ, ಬಹಳಸಲ ಕಾಡಿದುದರಿಂದ ಅದನ್ನು ಮಾತ್ರ ಕಳಿಸಿರುವುದು ಅಸಭ್ಯತೆಯೆಂದು ತಿಳಿದು ಒಂದನ್ನು ಈಗ ಕಳಿಸಿರುವೆನು. ನೀವು ನನ್ನನ್ನು ಸಮಕ್ಷಮ ಕಾಣಲು ಬಯಸಿರುವಿರಿ ಅದು ಸಾಧ್ಯವಿಲ್ಲ. ಮತ್ತೆ ಆರು ತಿಂಗಳವರೆಗೆ ನಾನೆಲ್ಲಿರುವೆನೋ, ಹೇಗಿರುವೆನೋ ನನಗೇ ತಿಳಿಯದ ವಿಷಯ. ಕ್ಷಮಿಸಿ. ಕೊನೆಯ ನಮಸ್ಕಾರ.

ನಿಮ್ಮ ಮಿತ್ರ—**ಗಾಯ್**

— ೫೯ —

[ಅಮೇರಿಕೆಯಲ್ಲಿ 'ಸ್ಟಾರ್' ಪತ್ರಿಕೆಯ ಮೇಲೆ ಮಾನ ನಷ್ಟದ ದಾವೆ ನಡೆಸಲು ಪ್ರಯತ್ನ ನಡೆದಿತ್ತು. ಕೊನೆಗೆ ಅದು ನಿಲ್ಲಿಸಲ್ಪಟ್ಟರೂ ಇದೇ ಸಂದರ್ಭದಲ್ಲಿ ಗಾಯ್ ನು ತನ್ನ ವಕೀಲನಾದ ಜೇಕಬ್‌ರಿಗೆ ತನ್ನ ಬಗ್ಗೆ ಧನಮತ್ತರಾದ ಅಮೇರಿಕೆಯ ಪತ್ರಿಕಾಕರ್ತರಿಗೆ ನಿಜವಾದ ಪರಿಚಯವಾಗಲೆಂದು ಅವರ ತಿಳುವಳಿಕೆಗಾಗಿ ಈ ಪತ್ರವನ್ನು ಬರೆದು ಕಳಿಸಿದ.]

ರಿವೇರಾ ೧೮೯೧

ಪ್ರಿಯ ವಕೀಲರೇ,

ಇನ್ನೇನು ನಾನು ಈ ಭೂಮಿಯ ಮೇಲೆ ಜೀವಿಸುವುದು ಕೆಲದಿನವರೆಗೆ ಎಂದು ನನ್ನ ನಂಬಿಕೆ. ಡಾಕ್ಟರರು ಈಗ ವಿಧಿಸಿರುವ ಈ ಚಿಕಿತ್ಸಾ ಕ್ರಮವನ್ನು ಅನುಭವಿಸಲಾರೆ. ಆತ್ಮ ಹತ್ಯೆಯೇ ಇದಕ್ಕೆ ಪರಿಹಾರವೆನಿಸುತ್ತಿದೆ.

ಇರಲಿ. 'ಸ್ಟಾರ್' ಪತ್ರಿಕೆಯವರ ಮೇಲೆ ಮಾನ ನಷ್ಟದ ದಾವೆಯ ಬಗ್ಗೆ ನಿಮ್ಮ ಸ್ವಂತ ತಿಳುವಳಿಕೆಗೆಂದು ಈ ವಿವರಗಳನ್ನು ಬರೆಯುತ್ತಿದ್ದೇನೆ. ಅಲ್ಲಿಯ ಜನರು ನಾನು ಯಾವನೋ ಕೆಲಸಕ್ಕೆ ಬಾರದ ಬರಹಗಾರನೆಂದು ಭಾವಿಸಿರಬೇಕು. ನಾನು ಕೀಳುದರ್ಜೆಯ ಸಾಹಿತಿಯೆಂದು ತಿಳಿದಿರಬೇಕು. ನನ್ನ ಅಮೇರಿಕೆಯ ಪ್ರಕಾಶಕರಾದ ಹಾರ್ಪರ್ ಬಂಧುಗಳಿಗೆ ಈ ಹೆಚ್ಚಿನ ವಿವರಗಳು ತಿಳಿದಿರಲಿಕ್ಕೆ ಸಾಕು. ನೀವು ಈ ಅಂಶಗಳನ್ನು ಅವರಿಗೆ ಬರೆದು ತಿಳಿಸಿರಿ; ಮರೆಯಬೇಡಿ.

ಫ್ರಾನ್ಸ ದೇಶದಲ್ಲಿ ಸಣ್ಣ ಕತೆಗಳಿಗೆ, ಕಾದಂಬರಿಗಳಿಗೆ ಸಾಹಿತ್ಯದಲ್ಲಿ ಎನ್ನುವುದಕ್ಕಿಂತಲೂ, ಜನರಲ್ಲಿ ಆದರ ದೊರೆಯುಂತೆ ಮುಡಿದವರಲ್ಲಿ ನಾನೊಬ್ಬ. ನನ್ನ ಸಣ್ಣ ಕತೆಗಳು ಬಹು ಜನಪ್ರಿಯವೆಂಬ ಮಾತು ಈ ಕೆ ಗಿನ ಅಂಕೆ ಸಂಖ್ಯೆಗಳೇ ಹೇಳುತ್ತವೆ. ನನ್ನ ಕೃತಿಗಳು ಜಗತ್ತಿನ ನಾನಾ ಭಾಷೆ ಗಳಲ್ಲಿ ಅನುವಾದಿತವಾಗಿವೆ. ಎಲ್ಲ ಪತ್ರಿಕಾಕರ್ತರು ನನಗೆ ಮಾತ್ರ ಒಂದ ಸಾಲಿಗೆ ಒಂದು ಫ್ರಾಂಕಿನಂತೆ ಕೊಡುತ್ತಿರುವುದು. ಒಂದು ಸಣ್ಣ ಕತೆ ಕನಿಷ್ಟಪಕ್ಷ ೫೦೦ ಫ್ರಾಂಕುಗಳನ್ನು ನನಗ ಕೊಡುತ್ತಿರುವರು. ತಮಗೆ ಬೇಕ ದರೆ ನನ್ನ ಸಾಹಿತ್ಯಕೃತಿಗಳ ಬಗ್ಗೆ ಮತ್ತು ವರಮಾನದ ಬಗ್ಗೆ ಪ್ರಕಟವಾ

ರುವ ಆಧಾರಗಳನ್ನು ಮತ್ತು ಇತರ ಅಂಕೆ ಸಂಖ್ಯೆಗಳ ವಿವರ ಹೀಗಿದೆ :—
ನನ್ನ ಆದಾಯದ ಬಗ್ಗೆ ಒಂದು ಪತ್ರಿಕೆಯಲ್ಲಿ ನನ್ನ ಬಗ್ಗೆ ಪ್ರಕಟವಾದ ವಿವರ:-

“ಗಾಯ್-ದ-ಮೋಪಾಸಾ ಇವರದು ಫ್ರೆಂಚ ಕಥಾ ಮತ್ತು ಕಾದಂಬರಿ ಸಾಹಿತ್ಯದಲ್ಲಿ ಹೊಸಮಾರ್ಗ, ಜನಪ್ರಿಯವಾದ ಮಾರ್ಗ. ಜನರಿಗೆ ಉತ್ತಮ ಮಾರ್ಗದರ್ಶಕನಾಗಿರುವರು. ೨೧ ಸಂಪುಟಗಳಲ್ಲಿ ಇವರ ಕೃತಿಗಳು ಪ್ರಕಟವಾಗಿವೆ. ಕೇವಲ ಒಂದೆರಡು ದಿನಗಳಲ್ಲಿ ಮೊದಲ ಆವೃತ್ತಿಯ ಪ್ರತಿಗಳು ತೀರಿಹೋದ ನಿದರ್ಶನಗಳೂ ಇವೆ. ಫ್ರಾನ್ಸದಲ್ಲಿ ೧,೯೯೦೦೦ ಸಣ್ಣ ಕತೆಗಳ ಪ್ರತಿಗಳು, ೧,೮೦,೦೦೦ ಕಾದಂಬರಿಗಳು, ೨೪,೦೦೦ ಪ್ರವಾಸ ಲೇಖಗಳೂ ಮಾರಾಟವಾಗಿವೆ. ಇದು ಇವರ ಕೃತಿಗಳು ಮಾರಾಟವಾದ ಸಂಖ್ಯೆ. ಇದಲ್ಲದೆ ಇವರ ಕೃತಿಗಳು ಇತರ ಭಾಷೆಗಳಲ್ಲಿಯೂ ಪ್ರಕಟವಾಗಿ ಇದಕ್ಕಿಂತಲೂ ಹೆಚ್ಚು ಪ್ರತಿಗಳು ಮಾರಾಟವಾಗಿವೆ. ಇದರಿಂದ ಗಾಯ್‌ರಿಗೆ ವರಮಾನವೂ ಹೇರಳವಾಗಿ ದೊರೆತಿದೆ”.

ವಕೀಲರೇ, ಇನ್ನು ನಾನು ಹೆಚ್ಚು ಬರೆಯುವುದಿಲ್ಲ. ನೀವು, ನನ್ನ ತಾಯಿ, ಇಬ್ಬರೇ ನನ್ನ ಆಸ್ತಿಯ ವಿವರಗಳನ್ನು ಬಲ್ಲವರು. ಎಲ್ಲವೂ ನಿಮ್ಮ ಕೈಯಲ್ಲಿದೆ; ನೀವೇ ನನ್ನ ಉತ್ತರಾಧಿಕಾರಿಗಳು. ಪತ್ರ ದೊಡ್ಡದಾಯಿತು. ಕ್ಷಮಿಸಿ.

ನಿಮ್ಮ ವಿಶ್ವಾಸಿಗ—**ಗಾಯ್**

## ಗಾಯ್‌ನ ಕೊನೆಯ ಪತ್ರ

— ೬೦ —

(ಗಾಯ್‌ನಿಗೆ ಮಾನಸಿಕ ಉಗ್ರತೆಯಿಂದ ಅಸ್ತವ್ಯಸ್ತ ಪ್ರಲಾಪ ಮುಂತಾದವು ೧೮೯೧ ಡಿಸೆಂಬರದಲ್ಲಿ ಕಾಣಿಸಿಕೊಂಡವು. ಆದರೂ ಕೆಲ ಸಮಯ ಅಂದರೆ ಅವನ ತಲೆ ಸಮವಾಗಿದ್ದಾಗ ತನ್ನ ಡಾಕ್ಟರ ಮಿತ್ರನಾದ ಕಾಜೇಲೇರಿಗೆ ಬರೆದ ಪತ್ರ.)

ಕೇನ್ಸ. ಡಿಸೆಂಬರ ೧೮೯೧

**ಮಿತ್ರರಾದ ಡಾ. ಕಾಜೇಲರೆ,**

ಕ್ಷಮಿಸಿ. ನನ್ನ ಸ್ಥಿತಿ ತೀರ ಕೆಡುತ್ತ ಬಂದಿದೆ. ನಿನ್ನೆಯಿಂದ ನನ್ನ ದೇಹಾದ್ಯಂತವೂ ಉಪ್ಪು ಸೇರಿಕೊಂಡಂತಿದೆ. ಬಾಯಲ್ಲಿ ನೀರೇ ಊರುವುದಿಲ್ಲ. ತುಟಿಗಳು ಒಣಗುತ್ತವೆ. ಚಪ್ಪರಿಸಿದರೆ ಉಪ್ಪು ತಿಂದಂತೆನಿಸುತ್ತದೆ. ನನ್ನ ಮಾನಸಿಕ ಗೊಂದಲದ ಸ್ಥಿತಿ ತೀರ ಅವರ್ಣನೀಯ. ನನ್ನ ಅಂತ್ಯಕಾಲ ಸಮೀಪಿಸಿದಂತಿದೆ. ತಲೆನೋವು ಬಂದಿತೆಂದರೆ ಆ ವೇದನೆ ಹೇಳಲಾರೆ. ಸಾವೇ ಬಂದಂತೆನಿಸುತ್ತದೆ. ನನ್ನ ಸೆಕ್ರೆಟರಿ ಫ್ರಾಂಕೋ "ತಾವು ದೋಣಿಯಿಂದಿಳಿದು ಮನೆಗೆ ಬರುವಾಗ ನೀವು ಸರಿಯಾಗಿ ಹೆಜ್ಜೆಗಳನ್ನಿಡುತ್ತಿರಲಿಲ್ಲ. ಒಂದೊಂದು ಸಲ ಕಾಲುಗಳನ್ನೇ ಎತ್ತಿ ಇಡುವುದು, ಮತ್ತೊಂದು ಸಲ ಅಪ್ಪಳಿಸಿ ನೆಲವನ್ನು ತುಳಿಯುವುದು. ಹೀಗೇಕೆ ವಿಕವಿಕಾರವಾಗಿ ಮಾಡಿದಿರಿ" ಎಂದು ಒಂದುಸಲ ಕೇಳಿದ. ನಾನು ಅಂದು ಆ ರೀತಿ ನಡೆದಂತೆ ನನಗೆ ಅರಿವೇ ಇಲ್ಲ.

ಇನ್ನು ಕೆಲವು ದಿನಗಳಲ್ಲಿ ನನಗೆ ಸಾವು ಖಂಡಿತವಾಗಿ ಬರುವುದೆಂದು ತಿಳಿದಿದ್ದೇನೆ. ಡಾಕ್ಟರುಗಳು ಬರುತ್ತಿರುವರು; ಉಪಚಾರ ನಡೆದಿದೆ; ನಿರ್ವಾಹವಿಲ್ಲದೆ ನಗುವಿನಿಂದಲೇ ಕಾಲವನ್ನು ಕಳೆಯುತ್ತಲಿದ್ದೇದೆ. ನಿನ್ನೆ ರಾತ್ರಿ ನನ್ನ ಮಿತ್ರಳೋರ್ವಳು ಬಂದು ನನ್ನ ವಿಕಾರಾವಸ್ಥೆಯನ್ನು ಕಂಡು ಗಾಬರಿಗೊಂಡು ಮನೆಗೆ ಓಡಿ ಹೋದಳಂತೆ!

ಇದೆಲ್ಲವೂ ಸಾವಿನ ಸನ್ನಿಹಿತದ ಸೂಚನೆಯಲ್ಲವೇ, ಡಾಕ್ಟರ್? ನನ್ನ ಮೆದುಳು ತೀರಾ ಕೆಟ್ಟು ಹೋಗಿದೆ, ಮಿತ್ರರೇ. ನನ್ನ ಈ ಹುಚ್ಚು ಗುಣವಾಗಲಾರದು. ಮುಗಿಯಿತು ನನ್ನ ಕಥೆ! ನಮಸ್ಕಾರ! ನೀವು ನನ್ನನ್ನು ಮತ್ತೆ ಜೀವಂತ ಕಾಣಲಾರಿರಿ. ಇದೇ ಕೊನೆಯ ನಮಸ್ಕಾರ! ನಮಸ್ಕಾರ!

ನಿಮ್ಮ ಆತ್ಮೀಯ ಮಿತ್ರ—**ಗಾಯ್**



# ಗಾಯ್‌ನ ಕೊನೆಯ ದಿನಗಳು

[೧೮೯೨ ರ ವರುಷದ ಮೊದಲನೆಯ ದಿನ ಗಾಯ್‌ನು ತನ್ನ ಸೆಕ್ರೆಟರಿಯೊಂದಿಗೆ ನೈಸ್‌ನಲ್ಲಿದ್ದ ತಾಯಿಯನ್ನು ಕಂಡು ರಾತ್ರಿ ಕೇನ್ಸಕ್ಕೆ ಬಂದುಸೇರಿದ. ಅಂದು ರಾತ್ರಿ ಅವನಿಗೆ ಹುಚ್ಚು ಹಿಡಿಯಿತು. ಉನ್ಮಾದದ ಅವಸ್ಥೆಯಲ್ಲಿ ತನ್ನ ಕೊರಳನ್ನು ಕತ್ತರಿಸಿಕೊಳ್ಳುವ ಯತ್ನ ವಿಫಲವಾಯಿತು. ಮೂರನೆಯ ದಿನ ಆತನನ್ನು ಡಾ. ಬ್ಲಾಂಛೇಯವರ ಆಸ್ಪತ್ರಿಗೆ ಒಯ್ದರು. ೨-೩-೧೮೯೨ ರಲ್ಲಿ ಗಾಯ್‌ನ ಮಿತ್ರರಾದ ಫಾಲ್ ಬೋಗೇ, ಹೆನ್ರಿ ಜೇಮ್ಸ್‌ಗೆ ಪತ್ರ ಬರೆದು ಗಾಯ್‌ನಿಗೆ ಕೊಂಚ ಗುಣವಾಗಿದೆ ಎಂದು ಸೂಚಿಸಿದರು. ಆದರೆ ಅವನು ಪೂರ್ಣ ಗುಣ ಹೊಂದಲೇ ಇಲ್ಲ. ಆಸ್ಪತ್ರಿಯಲ್ಲಿರುವಾಗ ಅವನಿಗೆ ಪಾರ್ಶ್ವವಾಯುವೂ ಬಂದಿತು. ಈ ಎಲ್ಲ ಸಮಯ ಗಾಯ್‌ನು ಅರೆ ಎಚ್ಚರದಲ್ಲಿ ಆಸ್ಪತ್ರಿಯಲ್ಲಿಯೇ ಇರಬೇಕಾಯಿತು. ೧೮೯೩ ರ ಮಾರ್ಚ ೬ ನೇ ದಿನಾಂಕ ಅವನ ನಾಟಕವೊಂದು ಪ್ರದರ್ಶಿಸಲ್ಪಟ್ಟಿತು. ಈ ವಿಷಯ ಗಾಯ್‌ನಿಗೆ ಎಚ್ಚರವಾದಾಗ ತಿಳಿಸಿದರೆ ಕೊಂಚ ಹಿಗ್ಗಿದನಂತೆ. ಇದಾದ ನಂತರ ಗಾಯ್‌ನನ್ನು ಕಾಣಲು ಯಾರನ್ನೂ ಬಿಡುತ್ತಿರಲಿಲ್ಲವಂತೆ. ಇವನ ಆಪ್ತ ಕಾರ್ಯದರ್ಶಿಯಾದ ಫ್ರಾಂಕೋ ಮಾತ್ರ ದಿನವೂ ಬರುತ್ತಲಿದ್ದ. ೧೮೯೩ ಜುಲೈ ೬ ನೇ ದಿನಾಂಕ ರಲ್ಲಿ ಅವನು ಮರಣ ಹೊಂದಿದ. ಹದಿನೆಂಟು ತಿಂಗಳ ಈ ಆಸ್ಪತ್ರಿವಾಸದ ವಿವರಗಳನ್ನು ಬ್ಲಾಂಛೇ ಡಾಕ್ಟರರ ಶಿಷ್ಯನಾದ ಫ್ರಾಂಕೆಕೇಲಿನ್ ಗ್ರೋ ಇವರು ಬರೆದಿಟ್ಟಿರುವರಂತೆ. ಇದರ ಕೆಲವು ಅಂಶಗಳು ಆನಂತರ ಪ್ರಕಟವಾದವಂತೆ.

ಇವನ ಶವ ಸಂಸ್ಕಾರವು ಪ್ಯಾರಿಸದ ಮೊಂಟಪರ್ನಾಸೇ (Montparnasse) ಸ್ಮಶಾನದಲ್ಲಿ ೧೮೯೩ ಜುಲೈ ಒಂಭತ್ತಕ್ಕೆ ನಡೆಯಿತು. ತಾಯಿಯಾದ ಲಾರಾ ಬರುವ ಸ್ಥಿತಿಯಲ್ಲಿರಲಿಲ್ಲ. ಗಾಯ್‌ನ ಪರಮ ಮಿತ್ರರಾದ ಫ್ರಾಂಕೋ, ಬ್ಲಾಂಛೇ, ರೂಸವಿಲ್ಟ್, ಕ್ಲೆಮೆನ್ಸ ಭ್ರೂನ್, ಮದಾಂ ಫಾಸ್ಕ್, ಗಾಯ್‌ನ ತಂದೆ ಮುಂತಾದವರು ಬಂದಿದ್ದರು.

ಇವನ ಬಗ್ಗೆ ಫ್ರೆಂಚ ದೇಶದ ಪತ್ರಿಕೆಗಳಲ್ಲಿ ಬಹಳ ದಿನಗಳವರೆಗೆ ಹೆಸರಾಂತ ಸಾಹಿತಿಗಳು ಲೇಖನಗಳನ್ನು ಬರೆದರು. ಇವನನ್ನು ನಾಡು ಸ್ತುತಿಸಿತು; ದೇಶ ಗೌರವಿಸಿತು. ಫ್ರೆಂಚ ಸಾಹಿತ್ಯಕ್ಕೆ ಅಪಾರ ಕಾಣಿಕೆಯನ್ನಿತ್ತು, ಫ್ರೆಂಚ ಸಾಹಿತ್ಯವನ್ನು ಜಗತ್ತು ಗೌರವಿಸುವಂತೆ, ದುಡಿದವರಲ್ಲಿ ಇವನು ಮುಖ್ಯನು. ಗಾಯ್‌ನ ಹಿತೈಷಿಯಾದ ಎಮಿಲ್ ಝೋಲಾನ ಲೇಖನದ ಕೆಲ ಅಂಶಗಳನ್ನು ಇಲ್ಲಿ ಕೊಡಲಾಗಿದೆ.

ಎಮಿಲ್ ಝೋಲಾನ ಲೇಖನದ ಕೆಲವಂಶಗಳು:—

"ಈ ತರುಣ ಬರಹಗಾರನಾದ ಗಾಯ್-ದ-ಮೋಪಾಸಾನಲ್ಲಿ ಮುಖ್ಯವಾಗಿ ಕಂಡುಬಂದುದು ಅವನಿಗಿದ್ದ ಜನಾನುರಾಗ. ಮಿತ್ರರನ್ನು ಬಹುಬೇಗ ಮನವೊಲಿಸುವ ಶಕ್ತಿ ಅವನಲ್ಲಿತ್ತು. ಸ್ವಲ್ಪೇ ಸಮಯದಲ್ಲಿ ಅವನು ಮಿತ್ರರೊಂದಿಗೆ ಆತ್ಮೀಯತೆಯನ್ನು ಬೆಳಸಿಕೊಳ್ಳುತ್ತಿದ್ದ. ಅವನು ಕತೆಗಳನ್ನು ಹೇಳತೊಡಗಿದನೆಂದರೆ ನಾವೆಲ್ಲರೂ ಮುಗ್ಧರಾಗಿ ಕೇಳುತ್ತ ಕೂತುಕೊಳ್ಳುತ್ತಿದ್ದೆವು. ಅವನು ಬಹು ಬೇಗ ಕೀರ್ತಿಗಳಿಸಿದ. ಅವನಲ್ಲಿ ಅಂತಹ ಕರ್ತೃತ್ವಶಕ್ತಿ ಇದ್ದುದರಿಂದಲೇ ಜನರಾಗಲಿ, ವಿಮರ್ಶಕರಾಗಲಿ ಅವನ ಗುಣ ಸಾಮರ್ಥ್ಯಗಳನ್ನು ಅರಿತು ಅವನೋರ್ವ ಸಾಹಿತಿಯೆಂದು ಪರಿಗಣಿಸಿದರು. ಅವನು ಕೀರ್ತಿಶಿಖರವನ್ನು ಬಲು ಬೇಗ ಏರಿಹೋದ. ಇದು ಮತ್ತಾವ ಸಾಹಿತಿಗೂ ಸಾಧಿಸಲಿಲ್ಲ. ಇವನು ಬರೆದಂತಹ ಕತೆಗಳನ್ನು ಮತ್ತಾವನಾದೂ ಬರೆದಿದ್ದರೆ ಮೂಗು ಮುರಿದು, ಕಟುವಾಗಿ ಟೀಕಿಸಿ, ಬೈಯುತ್ತಿದ್ದರು. ಆದರೆ ಅದೇ ಜನರು ಇವನು ಬರೆದುದೆಲ್ಲವನ್ನು ನಗುಮುಖದಿಂದ, ಸಹನೆಯಿಂದ ಆಹ್ವಾನಿಸುತ್ತಿದ್ದರು. ಇವನು ಗಾರುಡಿಯಂತೆ ಜನರನ್ನು ಸಂಪೂರ್ಣ ವಶಮಾಡಿಕೊಂಡಿದ್ದನು. ಇವನು ಅನಾಯಾಸವಾಗಿ ಜನಾದರಣೆಯನ್ನು, ಪ್ರೇಮವನ್ನು, ಸ್ವಲ್ಪೇ ಸಮಯದಲ್ಲಿ ಗುಡ್ಡದಷ್ಟು ಕೀರ್ತಿಯನ್ನೂ, ಹೇರಳವಾದ ಹಣವನ್ನೂ, ಸಾಗರದಷ್ಟು ಸ್ನೇಹ ಸಂಪತ್ತನ್ನು ಗಳಿಸಿದನು. ಅವನ ಕೃತಿಗಳು ನಾನಾ ರೀತಿಯ ಜನರ ಸ್ವಭಾವ ಅಭಿರುಚಿಗಳಿಗೆ ಅನುಕೂಲವಂಥವುಗಳಾಗಿದ್ದವು. ಎಲ್ಲ ಬಗೆಯ ಜನರೂ ಅವನ ಬರಹಗಳನ್ನು ಆದರದಿಂದ ಓದತೊಡಗಿದ್ದರು.

"ಈ ವಿಧವಾಗಿ ಕೀರ್ತಿಗಳಿಸಲು ಕಾರಣವೆಂದರೆ ಅವನು ತನ್ನ ಕಥೆಗಳಿಗೆ ಉಪಯೋಗಿಸುತ್ತಲಿದ್ದ ಕಥಾವಸ್ತು. ಇದು ಫ್ರೆಂಚದೇಶದ್ದೇ. ತನ್ನ ಸುತ್ತುಮುತ್ತಲಿನ ವಾತಾವರಣ, ಫ್ರೆಂಚದೇಶದ ನಾನಾ ಪ್ರದೇಶಗಳ ಸುಂದರ ನಿಸರ್ಗದ ವರ್ಣನೆಗಳು, ಫ್ರೆಂಚ ಸಮಾಜದಲ್ಲಿಯ ನಾನಾ ಜನ, ಜಾತಿಗಳ ರೀತಿನೀತಿಗಳು, ಕುಂದುಕೊರತೆಗಳು, ಅವರ ಸುಂದರ ಗುಣಗಳು, ಮುಂತಾದವುಗಳಲ್ಲವೆ, ಹೊರಗಿನವನ್ನು ಏನನ್ನೂ ಉಪಯೋಗಿಸುತ್ತಿರಲಿಲ್ಲ. ಅವನ

ಕೃತಿಗಳಲ್ಲಿದ್ದ ಸರಳತೆ, ವಿವರ, ತುಲನಾತ್ಮಕವಾದ ನಿರ್ಣಯ, ಮತ್ತು ನಿರ್ವಿವಾದರೀತಿಯಲ್ಲಿ ಹೇಳುವ ಧೋರಣೆ, ಮುಂತಾದವು ಜನರಿಗೆ ರುಚಿಸುತ್ತಿತ್ತು. ತಾನು ಕಂಡುದನ್ನು, ಕಂಡಂತೆ ಬರೆಯಲು ಅಂಜುವ ಸ್ವಭಾವ ಅವನದಾಗಿರಲಿಲ್ಲ. ಅವನ ಎದೆಗಾರಿಕೆಯನ್ನು ಜನಮೆಚ್ಚಿತು.

"ಫ್ರೆಂಚ ಸಾಹಿತ್ಯಕ್ಕೆ ಬೆಳಕನ್ನು ನೀಡಿದವನು ಇವನು. ವಿಪುಲ ಕೀರ್ತಿಯನ್ನು ಸಂಪಾದಿಸಿ, ಈ ಸಾಹಿತ್ಯದಲ್ಲಿ ದುಡಿದು ಹೋದ ಹೆಸರಾಂತ ಸಾಹಿತಿಗಳಾದ ರೆಬೇಲೇ, ಮಾಂಟೇನ್, ಮೋಲಿಯರ್, ಲಾಫೊಂಟೇ ಮುಂತಾದವರ ದಾರಿಯನ್ನೇ ತುಳಿದು ಫ್ರೆಂಚ ಸಂಸ್ಕೃತಿಗೆ ಉತ್ತಮ ಕಾಣಿಕೆಗಳನ್ನಿತ್ತ ಮಹಾಸಾಹಿತಿ ಇವನು. ಇವನು ನಿರ್ಮಿಸಿದ ಸಾಹಿತ್ಯ ಪಾಕದ ಸವಿಯನ್ನುಣ್ಣಲು ಜನರು ಸದಾ ಉತ್ಸುಕರಾಗಿದ್ದರು. ಇವನ ತಿಳಿಹಾಸ್ಯದ ಚುಟಿಕೆಗಳನ್ನು ಓದಿ ನಕ್ಕು ನಲಿಯಲು ಆತುರರಾಗಿದ್ದರು. ಇವನ ಬರಹದ ಸುಂದರ, ಬಿಗುವಿನ, ಸಮಓಟದ, ಶೈಲಿಗೆ ಮರುಳಾಗಿದ್ದರು. ಸರ್ವಸುಂದರವಾದ ಚೆಲುವೇ, ಜೀವನದ ಸಾರವೆಂದು ಸಾರಿ, ಆ ರಸವನ್ನು ಜಾಣತನದಿಂದ ಸೂರೆಗೊಳ್ಳುವುದೇ ಮಾನವನ ಕರ್ತವ್ಯವೆಂದು ಸೂಚಿಸುವ ದಿವ್ಯಸಂದೇಶ ಇವನ ಎಲ್ಲ ಕೃತಿಗಳಲ್ಲಿ ನಾವು ಕಾಣಬಹುದು. ಇವನು ನಿರ್ಮಿಸಿದ ಸಾಹಿತ್ಯ ಸೃಷ್ಟಿ ನಮಗೊದಗುವ ಹಬ್ಬದ ದಿನಗಳ ಸವಿಯೂಟದಂತೆ. ಇವನ ಕೃತಿಗಳನ್ನು ತಿಳಿಯಲು ನಾವೆಲ್ಲರೂ ಆತುರದಿಂದ ಇರುತ್ತಿದ್ದೆವು.

"ಇವನ ಜೀವನವು ಸುಖ--ದುಃಖಗಳಿಂದ ಮಿಶ್ರಿತವಾಗಿತ್ತು. ಆನಂದ, ಲಹರಿ, ಭೋಗಗಳಿಂದ ತುಂಬಿತ್ತು. ಅಷ್ಟೇ ಕಷ್ಟವನ್ನೂ, ನಿಷ್ಠುರವನ್ನೂ ಉಂಡು ವೇದನೆಯನ್ನೂ ಅನುಭವಿಸಿದ್ದ. ಆಶಾವಾದಿಯಾದ ಮಾನವನು ತನ್ನೆಲ್ಲ ಜೀವನದಲ್ಲಿ ಎಷ್ಟೆಷ್ಟು ಸಂಪತ್ತು, ಕೀರ್ತಿ, ಭೋಗಗಳನ್ನು ಗಳಿಸಬಲ್ಲನೆಂಬುದನ್ನೂ, ಅಷ್ಟೇ ಅವಧಿಯಲ್ಲಿ ದೀಪದ ಹುಳಗಳಂತೆ ನಾಶವಾಗಲೂ ಬಲ್ಲನೆಂಬ ದಿವ್ಯ ನಿದರ್ಶನವನ್ನೂ ನಾವು ಇವನ ಜೀವನದ ಇತಿಹಾಸದಿಂದ ತಿಳಿಯ ಬಹುದಾಗಿದೆ. ಅಲ್ಲದೆ ಇದರಿಂದ ಅನೇಕರಿಗೆ ಅನೇಕ ರೀತಿಯ ಪಾಠಗಳನ್ನು ಕಲಿಯಲು ಸಾಧ್ಯವಿದೆಯೆಂದು ಹೇಳಬಹುದು. ಜನಪ್ರಿಯ

ನಾದ ಸಾಹಿತಿ, ನಮ್ಮ ಆತ್ಮೀಯ ಬಂಧು, ನಮ್ಮೆದುರೇ ಅಳಿಯುವುದು ವಿಷಾದದ ಸಂಗತಿ. ಅವನ ಆತ್ಮಕ್ಕೆ ಈಗಲಾದರೂ ಶಾಂತಿ ದೊರೆಯಲಿ."

—ಝೋಲಾ

[ ಈ ಲೇಖನವನ್ನು ಎಮಿಲ್ ಝೋಲಾ ತಕ್ಷಣವೇ ಬರೆದು ಪತ್ರಿಕೆಗೆ ಕಳಿಸಿದನಂತೆ. ಅದು ಬಂದೆರಡು ದಿನಗಳಲ್ಲಿಯೇ ಪ್ರಕಟವಾಗಿ ಜನರನ್ನು ಹೆಚ್ಚು ದುಃಖದಲ್ಲಿ ಕೆಡವಿತಂತೆ. ಈ ಕೊನೆಯ ಲೇಖನ ಗಾಯ್-ದ-ಮೋಪಾಸಾನ ಜೀವ ಹಕ್ಕಿ ಹಾರಿಹೋದನಂತರ ಇವನ ಏಳಿಗೆಗೆ ಕಾರಣರಾದವರೊಲ್ಲಬ್ಬನಾದ ಝೋಲಾನ ಮೇಲೆ ಆದ ಪರಿಣಾಮವೇನೆಂಬುದು ಸೂಚಿಸುತ್ತದೆ. ಇದೊಂದು ಮುಖ್ಯವಾದ ಅಂಶವೆಂದು ಇದನ್ನಿಲ್ಲಿ ಪ್ರಕಟಿಸಲಾಗಿದೆ.

ಇಲ್ಲಿಗೆ ಮೋಪಾಸಾನ ಒಲೆಗಳು ಮುಗಿದವು. ಇನ್ನು ಇವನಿಗೆ ತಾಯಿಯಾದ ಲಾರಾ, ಗುರು ಫ್ಲಾಬೇರ್, ಮತ್ತು ಇತರ ಮಿತ್ರವೃಂದದವರು ಬರೆದ ಒಲೆಗಳನ್ನು ಮತ್ತೊಮ್ಮೆ ಪ್ರಕಟಿಸಲಾಗುವದು.]




## ಹುಬ್ಬಳ್ಳಿ ಆನಂದ ಗ್ರಂಥಮಾಲೆಗೆ ನೀವೇಕೆ ಚಂದಾದಾರರಾಗಬೇಕು?

(೧) ಹೆಸರಾಂತ ಸಾಹಿತಿಗಳ ಸಲಹೆಗಾರರ ಮಂಡಳ.

(೨) ಉತ್ತಮ ಸಾಹಿತ್ಯದ ರಸದೂಟ.

(೩) ವರುಷದಲ್ಲಿ ಏಳೆಂಟು ರೂಪಾಯಿಗಳ ಸುಂದರ ನಾಲ್ಕು ಪುಸ್ತಗಳು.




...ಚಂದಾ ಹಣ : ರೂ. ೫-೮-೦

...ಚಂದಾ ಹಣ : ರೂ. ೬-೮-೦

...ಕೋಬಾಚಾರ್ಯ ಬಿ. ಎ. ಬಿ. ಟಿ.

ಹುಬ್ಬಳ್ಳಿ ... ಪಾದಕ, ಆನಂದ ಗ್ರಂಥಮಾಲಾ,

## ವಿಜ್ಞಾಪನೆ

ಇಲ್ಲಿಗೆ ಮೋಪಾಸಾನು ತನ್ನ ಜೀವನದಲ್ಲಿ ಬರೆದ ಪತ್ರಗಳ ಸಂಕಲನ ಮುಗಿಯಿತು. ಸಾಹಿತಿಯ ಪತ್ರಸಾಹಿತ್ಯವು ಅವನ ಜೀವನದ ಅನೇಕ ಮಹತ್ವದ ವಿಷಯಗಳನ್ನು ವಿಶದೀಕರಿಸುವುದಲ್ಲದೆ ಅವನು ಜೀವಿಸಿದ ಕಾಲದ ರಾಜಕೀಯ, ಮತ್ತು ಸಮಾಜದ ಪರಿಸ್ಥಿತಿಯನ್ನು ವಿವರಿಸುವವು ಎಂಬುದರಲ್ಲಿ ಯಾವ ಸಂಶಯವೂ ಇಲ್ಲೆಂದು ನನ್ನ ಭಾವನೆ.

ಭಾರತ ಸಾಹಿತ್ಯದಲ್ಲಿ, (ಪತ್ರ ಸಾಹಿತ್ಯದಲ್ಲಿ) ನಮ್ಮ ಮುಖ್ಯ ಪ್ರಧಾನರಾದ ಪಂಡಿತ ಜವಹರಲಾಲರ "ಮಗಳಿಗೆ ತಂದೆಯ ಓಲೆಗಳು" ಮತ್ತು ಶ್ರೀ ಸಿದ್ದವ್ವನಹಳ್ಳಿ ಕೃಷ್ಣಶರ್ಮರ "ಜಗತ ಕಥಾವಲ್ಲರಿ" ಹೆಚ್ಚು ಮನ್ನಣೆಯನ್ನು ಪಡೆದಿವೆಯೆಂಬುದರಲ್ಲಿ ಯಾವ ಸಂಶಯವೂ ಇಲ್ಲ. ಇವು ಕನ್ನಡಕ್ಕೆ ಬಂದುದು ಸ್ವಾಗತಾರ್ಹವೇ ಸರಿ. ಪತ್ರಸಾಹಿತ್ಯವು ಪ್ರಾಚ್ಯಾತ್ಯ ಸಾಹಿತ್ಯದಲ್ಲಿ ಅತ್ಯುತ್ತಮ ಸ್ಥಾನವನ್ನು ಪಡೆದಿದೆಯೆಂಬುದನ್ನು ಬೇರೆಹೇಳಬೇಕಾಗಿಲ್ಲ. ಆದುದರಿಂದಲೇ ಪ್ರಪಂಚದ ಅತ್ಯುತ್ತಮ ಕಥೆಗಾರನಾದ ಗಾಯ್-ದ-ಮೋಪಾಸಾನ ಜೀವನದ ವಿವರಗಳನ್ನು ನಾನು ಅಭ್ಯಾಸಮಾಡುವಾಗ ನನಗೆ ದೊರೆತ ಅನೇಕ ಪತ್ರಗಳನ್ನು ಸಂಗ್ರಹಿಸಿ ಕನ್ನಡ ಜನತೆಗೆ ಕೊಡುತ್ತಲಿದ್ದೇನೆ. ನಮ್ಮ ಕನ್ನಡ ಸಾಹಿತ್ಯಕ್ಕೆ ಇದೊಂದು ಹೊಸ ಕಾಣಿಕೆಯೆಂದು ಭಾವಿಸಿದ್ದೇನೆ. ಕನ್ನಡದಲ್ಲಿ ಈಗಾಗಲೇ ಶ್ರೀ ನಿರಂಜನರ, ಪ್ರೊ. ಹಿರೇಮಲ್ಲೂರು, ಈಶ್ವರನ್ನರ, ಶ್ರೀ ತಿ. ಸಿದ್ದಪ್ಪನವರ, ಮತ್ತು ನನ್ನ 'ಚಿತ್ರಗುಪ್ತ' 'ಜನಪ್ರಗತಿ' 'ಉಷಾ' 'ನವಯುಗ' ಮತ್ತು 'ಜಯಕರ್ನಾಟಕಗಳ' ಮೂಲಕ ಅನೇಕ ಪತ್ರಗಳು ಪ್ರಕಟವಾಗಿವೆ. ಶ್ರೀ ತಿ. ಸಿದ್ದಪ್ಪನವರ, ಪತ್ರಗಳು "ಪೂರ್ಣಿಮಾ" ಎಂಬ ಪುಸ್ತಕರೂಪದಲ್ಲಿ ಪ್ರಕಟವಾಗಿವೆ. ಇದೇ ಮಾರ್ಗದಲ್ಲಿ ನಾನು ಆಗಲೇ ಧಾರವಾಡದ "ಜಯಕರ್ನಾಟಕ" ವಾರಪತ್ರಿಕೆಯ ಮೂಲಕ ಪ್ರಕಟವಾದ ಕೆಲವು ಪತ್ರಗಳನ್ನು ಮತ್ತೆ ಕೆಲವು ಪತ್ರಗಳನ್ನು ಹೊಸದಾಗಿ ಆನಂದ ಗ್ರಂಥ ಮಾಲೆಯಲ್ಲಿ ಈಗ ಪ್ರಕಟಿಸುತ್ತಲಿದ್ದೇನೆ.

ಗಾಯ್-ದ-ಮೋಪಾಸಾನ ಜೀವನದ ಕೆಲವು ಮುಖ್ಯಾಂಶಗಳನ್ನು ತಿಳಿಯಬಹುದಾದ ವಿಷಯನ್ನೊಳಗೊಂಡ ಈ ಪತ್ರಸಾಹಿತ್ಯ ಕನ್ನಡಿಗರಿಗೆ ರುಚಿಸುವುದೆಂದು ನನ್ನ ಭಾವನೆ.

ಈ ಪತ್ರ ಸಂಕಲನವನ್ನು ಆದಷ್ಟು ಶ್ರದ್ಧೆವಹಿಸಿ, ಮೋಪಾಸಾನ ಜೀವನದ ಚರಿತ್ರೆಗೆ ಹೊಂದಿಕೊಳ್ಳುವಂತೆ ಕೂಡಿಸಲಾಗಿದೆ. ಇದರಲ್ಲಿ ಅನಿವಾರ್ಯವಾಗಿ ಕೆಲವೊಂದು ತಪ್ಪುತಡೆಗಳಾಗಿದ್ದಲ್ಲಿ ಓದುಗರ, ವಿಮರ್ಶಕರ, ಕ್ಷಮೆಯನ್ನು ಬೇಡಿಕೊಳ್ಳುತ್ತಿದ್ದೇನೆ.

ಈ ಪತ್ರ ಸಂಕಲನದ ಜತೆಗೆ ಗಾಯ್-ದ- ಮೋಪಾಸಾನ ಕೆಲವು ಅಪ್ರಕಟಿತ ಉತ್ತಮ ಕತೆಗಳನ್ನು ಪ್ರಕಟಿಸಿದ್ದೇನೆ. ಇದರಿಂದ ಪುಸ್ತಕದ ಗಾತ್ರವು ಹೆಚ್ಚಿದೆ. ಅಲ್ಲದೆ ಓದುಗರು ಅವನ ಕಥನ ಕಲೆಯ ವೈಶಿಷ್ಟ್ಯವನ್ನು ಇಲ್ಲಿ ಕಾಣಬಹುದು. ಇವುಗಳು ಆ ಮಹಾಸಾಹಿತಿಯ ಅಂತರಂಗದ ಭಾವನೆಗಳನ್ನೂ, ಅವನ ಜೀವನದ ಕೆಲವಂಶಗಳನ್ನು ಚಿತ್ರಿಸುವ ಕತೆಗಳೆಂದು ನನ್ನ ಭಾವನೆ. ಈಗಾಗಲೇ ''ಅರ್ಪಣ'' ಮತ್ತು "ಸೈಮನ್ನನ ತಂದೆ" ಮತ್ತು ಶ್ರೀ ಚುಳಕಿ ಗೋವಿಂದರಾಯರ "ಮೋಪಾಸಾನ ಕಥೆಗಳು" ಇವುಗಳ ಮೂಲಕ ಪರಿಚಯವಾದ ಮೋಪಾಸಾನ ಕಥಾ ಸಾಹಿತ್ಯಕ್ಕೆ ಇದೂ ಒಂದು ಓದಲರ್ಹವಾದ ಸಂಕಲನವಾದೀತೆಂಬ ಭಾವನೆಯಿಂದ ಈ ಪುಸ್ತಕವನ್ನು ಓದುಗರಿಗೆ ಅರ್ಪಿಸುತ್ತಲಿದ್ದೇನೆ. ಇದು ಜನಪ್ರಿಯವಾದರೆ ನನಗೆ ಸಂತೋಷ. ಇದರಲ್ಲಿಯ ದೋಷಗಳೇನಾದರೂ ಇದ್ದರೆ ಅವು ನನ್ನವೇ ಆಗಲಿ; ಮೂಲ ಲೇಖಕನದಲ್ಲವೆಂದು ನನ್ನ ಅರಿಕೆ.

ಹುಬ್ಬಳ್ಳಿ<br>೧೬-೩-೫೩ }

**ಪಿ. ವೆಂಕೋಬಾಚಾರ್ಯ.**

